# ಕೊರವಂಜಿ



ಮೇ ೧೯೪೪

ಮಾಸ ಪತ್ರಿಕೆ


ಸಂಪಾದಕರು :
ಶ್ರೀ|| ರಾ. ಶಿ.

ಚಿತ್ರಕಾರರು :
ಶ್ರೀ|| ಆರ್. ಕೆ. ಲಕ್ಷ್ಮಣ್.

ಬರಹಗಾರರು :

ಶ್ರೀ|| ಕೈಂತಜೆ

ಶ್ರೀ|| ಬಿ. ವಿ. ಸ.

ಶ್ರೀ|| ನಾ. ಕ.

ಶ್ರೀ|| ಖಾರಾಂತ

ಶ್ರೀ|| ಬಿ. ಎಸ್. ರಾ

ಶ್ರೀ|| ಮೂರ್ತಿ

ಶ್ರೀ|| ರಾಜ



ಬಿಡಿ ಪತ್ರಿಕೆ -- ಕೇವಲ ಎರಡಾಣೆ


ಶ್ರೀ ನಗೆಯ ಮಾಸ ಪತ್ರಿಕೆ.

# ಕೊ ರ ವ ಂ ಜಿ

ಕೊರವಂಜಿಯು ತಿಳಿನಗೆಯ ಸಚಿತ್ರ ಮಾಸಪತ್ರಿಕೆ. ತಿಳಿಹಾಸ್ಯದ ಲೇಖನಗಳು, ಹರಟೆಗಳು, ಅಣಕವಾಡುಗಳು, ನಗೆ ಹಾಡುಗಳು ಇವುಗಳಿಗೆ ಸರ್ವದಾ ಸುಸ್ವಾಗತವುಂಟು. ಆದರೆ ವ್ಯಕ್ತಿಯನ್ನುದ್ದೇಶಿಸಿ ಬರೆದ ಲೇಖನಗಳಿಗೆ ಎಡೆಯಿಲ್ಲ.

ಲೇಖನಗಳನ್ನು ಕಳುಹಿಸುವವರು ತಮ್ಮಲ್ಲಿ ಒಂದು ಪ್ರತಿಯನ್ನಿಟ್ಟುಕೊಂಡರೆ ಬಹಳ ಒಳಿತು. ಸುಲಭವಾಗಿ ಓದುವಂತೆ ತಿಳಿಬರಹದಲ್ಲಿ ಬರೆದರೆ, ಅಚ್ಚಾದಾಗ ತಪ್ಪುನೆಪ್ಪುಗಳು ಕಡಿಮೆಯಾಗುವುವು.

ಸಂಪಾದಕೀಯ ಪತ್ರವ್ಯವಹಾರಗಳನ್ನು ಸಂಪಾದಕರಲ್ಲೂ ವ್ಯವಸ್ಥಾಪಕರಲ್ಲಿ ಮಿಕ್ಕ ವಿಚಾರಗಳನ್ನೂ ಪ್ರಸ್ತಾಪಿಸಬೇಕು.

ಬಳೇಪೇಟೆ, ಬೆಂಗಳೂರು ಸಿಟಿ.

**ವಾರ್ಷಿಕ ಚಂದಾ ಅಂಚೆ ಮೂಲಕ ರೂ. ೨—೦—೦**

**ಬಿಡಿ ಪ್ರತಿ ಕೇವಲ ಆಣೆ ೦—೨—೦**

---

**ಚಂದಾದಾರರು ವಿಳಾಸ ಬದಲಾವಣೆಯಾದಲ್ಲಿ, ಕೂಡಲೆ ನಮಗೆ ತಿಳಿಸಿದರೆ, ಬಹಳ ಸಹಾಯ ಮಾಡಿದಂತಾಗುವುದು.**

---

## ವಿ ಷ ಯಾ ನು ಕ್ರ ಮ ಣಿ ಕೆ

ಸಕಲವೂ ಪ್ರಿಯವಾದ

ಸಮರ ಕಾಲದಲ್ಲಿ



- ನಿಮಗೆ ಪ್ರಿಯವಾದ -

# "ರಾಜಾ ಸ್ನೋ"

ವನ್ನು ಜಾಗರೂಕತೆಯಿಂದ ಉಪಯೋಗಿಸಿ



ಭಾರತೀಯ ಕಾರ್ಮಿಕರಿಂದ

ಭಾರತೀಯ ಬಂಡವಾಳಗಾರರಿಂದ

ಭಾರತೀಯ ಕಲಾಕೌಶಲ್ಯದಿಂದ

ಕೂಡಿರುವುದೇ



# ಬೆಂಗಾಲ್ ಲ್ಯಾಂಪ್ಸ್

ತಯಾರಿಕೆಯ ವೈಶಿಷ್ಟ್ಯ

—

ಭಾರತದಲ್ಲೆಲ್ಲಾ ಉತ್ತಮವಾದುದೆಂದು

ಖ್ಯಾತಿಪಡೆದಿದೆ




ಸಂಪುಟ ೩] ಕೊರವಂಜಿ—ಮೇ ೧೯೪೪ [ಸಂಚಿಕೆ ೨

# ಕು ಹ ಕಿ ಡಿ ಗ ಳು

ಜಪಾನೀಯರು ಭಾರತದ ಮೇಲಿನ ದಂಡಯಾತ್ರೆಗೆ ಸುಲಭ ಹಾರ್ಮೋನಿಯಂಗಳನ್ನು ತರುತ್ತಾರೆಂಬುದು ಶುದ್ಧ ಸುಳ್ಳು.

—ಅಷ್ಟು ಅಮಾನುಷರಲ್ಲ ಅವರು.

✤ ✤ ✤

ಸಮರ ಸುದ್ದಿಗಾರನೊಬ್ಬನಿಗೆ ಹತ್ತು ಲಕ್ಷ ಆಸ್ತಿ ಇದೆಯಂತೆ.

—ಸಣ್ಣ ಕತೆಗಳನ್ನು ಬರೆದೂ ಬರೆದೂ ಸಂಪಾದಿಸಿದ ಹಣವಂತೆ—ತನ್ನ ಔದ್ಯೋಗದಲ್ಲಿ

✤ ✤ ✤

ಬಂಗಾಳಾ ಬೆಳೆಯು ಅತಿವೃಷ್ಟಿಯಿಂದ ಕೆಟ್ಟಿದೆಯಂತೆ.

—ಅತಿವೃಷ್ಟಿಯು ಶತ್ರು ಕಾರ್ಯವೆಂಬುದು ಸುಳ್ಳು.

✤ ✤ ✤

ರೇಷ್ಮೆ ಬೆಲೆಯು ಏರುತ್ತಿದೆಯಂತೆ.

—ಆದರೆ, ಬೆಣ್ಣೆಯಲ್ಲಿ ರೇಷ್ಮೆ ತೆಗೆಯುವವರಿಗೆ ಇದರಿಂದ ಏನೂ ಅನಾನುಕೂಲವಿಲ್ಲವಂತೆ.

"ರಷ್ಯಾದಲ್ಲಿ ಸಹ ವಿದ್ಯಾಭ್ಯಾಸವಿಲ್ಲ" (ಪತ್ರಿಕೆಯ ಸುದ್ದಿ)

—ಅಂದರೇನು ಅಲ್ಲಿಯೂ ಕೂಡ ವಿದ್ಯಾಭ್ಯಾಸವಿಲ್ಲವೆಂದೇ? ಅಥವಾ ಅಲ್ಲಿ ಸಹ ವಿದ್ಯಾಭ್ಯಾಸವಿಲ್ಲವೆಂದೇ? ಅವರು ಹೂಡಿರುವ ವೀರ ಸಂಗ್ರಾಮ ನೋಡಿದರೆ, ಮೊದಲನೆಯದೇ ಸರಿಯೆನ್ನಿಸುತ್ತದೆ.

✤ ✤ ✤

ಭಾರತೀಯರ ಸ್ಥಾನವೆಲ್ಲಿ? ಎಂದು ಪತ್ರಿಕೆಯ ಪ್ರಧಾನ ಲೇಖನ.

—ಎಲ್ಲೇನು ಬಂತು, ಬಸ್ಸಿನ ಮೆಟ್ಟಲಿನ ಮೇಲೆ.

✤ ✤ ✤

ಮಕ್ಕಳು ಬೇಕಾದ ತಿಂಡಿಯನ್ನು ತಿಂದರೆ, ಚೆನ್ನಾಗಿ ಬೆಳೆಯುತ್ತವೆಯಂತೆ.

—ಆದರೆ, ಈಗ ಇಜ್ಜಲಿನ ಬೆಲೆ ಜ್ಞಾಪಿಸಿಕೊಂಡರೆ, ಮಕ್ಕಳ ಸಾಮಾನ್ಯ ಆಹಾರ ಸೊನ್ನೆ.

✤ ✤ ✤

ಜನಾಬ್ ಜಿನ್ನಾರವರು ಇಂಗ್ಲೆಂಡಿಗೆ ಹೋಗಿ ಅಲ್ಲಿ ಭಾಷಣ ಮಾಡುವರೆಂಬ ಸುದ್ದಿಯು ನಿರಾಧಾರವಾದುದಂತೆ.

—ಅಮೆರಿಯನರ ಏರ್ಪಾಡಿನಲ್ಲಿ ಇಲ್ಲಿಯೇ ಕೆಲಸವಿದೆಯಂತೆ.

✤ ✤ ✤

ಉತ್ತಮ ವಾರ್ ಚಲನಚಿತ್ರಗಳನ್ನು ಕೇವಲ ಸಾವಿರ ರೂಪಾಯಿನಲ್ಲಿ ಮಾಡಬಹುದು ಎಂದು ಒಬ್ಬರ ಅಭಿಪ್ರಾಯ

—ಶುದ್ಧ ಅನ್ಯಾಯಕಾರ.

✤ ✤ ✤

ಮಾನುಷ ಲೋಪ ದೋಷಗಳಿಂದ ಮೋಟಾರು ಅಪಘಾತಗಳು ಎಂದು ಮನಶ್ಶಾಸ್ತ್ರಜ್ಞರೊಬ್ಬರ ಅಭಿಪ್ರಾಯ.

—ಅಮಾನುಷ ಮೋಟಾರುಗಳಿಗೆ ಇದು ನ್ಯಾಯವೇ?

✤ ✤ ✤

ಸಿನಿಮಾ ತಾರೆಯ ಮೇಲೆ ಸರ್ಕಸ್ ಸಿಂಹದ ಅನ್ಯಾಯ. (ಪತ್ರಿಕೆಯ ಸುದ್ದಿ)

—ಡೈರೆಕ್ಟರಾದೆನೆಂದು ಭಾವಿಸಿತೋ ಸಿಂಹ?

---

# ಉರಿಗಾಳು

ವೇವಲ್ ಪ್ರಭುಗಳು, "ಇತರರ ಹೊಗಳು" ಎಂಬ ಒಂದು ಗ್ರಂಥ ಬರೆದಿರುವರಂತೆ. ಅವರಿಗೆ ಇತರರು ಹಾಕಿದ ಹೂವಿನ ಹಾರಗಳ ವಿಷಯ ಅದರಲ್ಲಿಲ್ಲವಂತೆ.

✤ ✤ ✤

ಸರ್ಕಾರದ ಆಹಾರವಿತರಣ ಕ್ರಮವನ್ನು ವಿಮರ್ಶಿಸಲು ಯಾವ ಸಭೆಯನ್ನೂ ಸೇರಿಸಕೂಡದು, ಎಂದು ಒರೀಸಾ ಗವರ್ನರ್‌ರವರು ಆಜ್ಞೆ ಮಾಡಿರುವರಂತೆ.... ಹಾಗಾದರೆ, ಅಲ್ಲಿ ಸಂಗೀತಕಚೇರಿ, ಹರಿಕಥೆ, ಆರತಿಅಕ್ಷತೆ ಮುಂತಾದುವು ಕೂಡ ನಿಂತ ಹಾಗೆಯೇ!

✤ ✤ ✤

ಮದ್ರಾಸ್‌ನಗರದ "ಮರೀನಾ"ದಲ್ಲಿ ಇಂಗ್ಲೀಷ್ ಬ್ಯಾಂಡು ಬಾರಿಸುತ್ತಿದ್ದದ್ದನ್ನು ಮುನಿಸಿಪಾಲಿಟಿಯವರು ನಿಲ್ಲಿಸಿರುವರಂತೆ. ಸಮುದ್ರದಲ್ಲಿ ಬಿದ್ದು ಸಾಯುವುದನ್ನು ನಿಲ್ಲಿಸಲು ಈರೀತಿ ತೀರ್ಮಾನಿಸಿರಬಹುದೆಂದು ತೋರುತ್ತದೆ.

✤ ✤ ✤

"ಪ್ರತಿವರ್ಷವೂ ೩೦,೦೦೦ ಮಕ್ಕಳು ನಮ್ಮ ಕೈತಪ್ಪಿ ಹೋಗುತ್ತಿವೆ" ಎಂದು ಆಸ್ಟ್ರೇಲಿಯಾದ ಆರೋಗ್ಯಮಂತ್ರಿಗಳು ಗೋಳಿಟ್ಟರು....ಆ ಪೈಕಿ ಒಂದು ಮಗು ನಮ್ಮ ದೇಶಕ್ಕೆ ಬಂದು, ಬಂಗಾಲಾ ಗವರ್ನರ್‌ಗಿರಿ ಮಾಡುತ್ತಿದೆ. ಬೇಕಾದರೆ, ಕರೆದುಕೊಂಡು ಹೋಗಬಹುದು.

✤ ✤ ✤

"ಮದುವೆಯಾದವರು ಮಾತ್ರ ಅರ್ಜಿ ಹಾಕತಕ್ಕದ್ದು" ಎಂದು ಒಂದು ಕಂಪನಿಯವರು ಈಚೆಗೆ ಪ್ರಕಟಿಸಿದುದಕ್ಕೆ ಅರ್ಥವೇನೆಂದು ಈಗ ತಿಳಿಯಿತು.... ಅಂಥವರಾದರೆ, ಬಾಯಿಮುಚ್ಚಿ ಬೆನ್ನು ಬಗ್ಗಿಸಿ ಕೆಲಸಮಾಡುತ್ತಾರಂತೆ.

✤ ✤ ✤

ಸೋಮವಾರವೂ ಗುರುವಾರವೂ ಕಲ್ಕತ್ತಾದ ನಾಗರಿಕರು ಮಾಂಸ ತಿನ್ನುವ ಹಾಗಿಲ್ಲವಂತೆ. ಆಗ ಅವರಿಗೆ ಮೀಮಾಂಸವೇ ಗತಿ.

✤ ✤ ✤

ಒಬ್ಬರು ರಾಜರು ಶತ್ರುಭೀತಿನಿವಾರಣಾರ್ಥವಾಗಿ ಜಯಜಾತಕದ ಕನ್ಯೆಯೊಬ್ಬಳನ್ನು ವರಿಸಲು ನಿಶ್ಚಯಿಸಿರುವುದಾಗಿ ತಿಳಿಸಿರುವರಂತೆ........ಬದ್ಧಕಂಕಣ ಅಂದರೆ, ಅದು !

✤ ✤ ✤

"ರೈತನ ಮನೆಬಾಗಿಲಲ್ಲೇ ಕಾಡು ಬೆಳೆಸಿ ನಾವು ಅವನಿಗೆ ಸೌದೆ ಒದಗಿಸಬೇಕು". (ಸರ್ ಜೋಗೇಂದ್ರಸಿಂಗ್)........ ಹೂಳುವ ಪದ್ಧತಿ ಇರುವವರಿಗೆ, ಮನೆಬಾಗಿಲಲ್ಲೇ........ಗುಂಡಿ

✤ ✤ ✤

"ಹೀಗೆಯೇ ಬಿಟ್ಟರೆ, ಇಲ್ಲಿರುವ ಇಂಡಿಯನ್ ಜನಾಂಗದವರು ಆಫ್ರಿಕಾ ಖಂಡವನ್ನೇ ನುಂಗಿಬಿಟ್ಟಾರು !" (ಪಾರ್ಲಿಮೆಂಟಿನಲ್ಲಿ ಆಕಟ್‌ರವರು) ಪಾಪ ! ಅಲ್ಲಿರುವ ನಮ್ಮವರಿಗೆ ಅಷ್ಟೊಂದು ಹಸಿವೇ ?

✤ ✤ ✤

ಯುದ್ಧಾನಂತರ, ಪ್ರತಿವರ್ಷವೂ ೧೫ ಭಾರತೀಯರನ್ನು ಸಂಯುಕ್ತ ಸಂಸ್ಥಾನದೊಳಕ್ಕೆ ಬಿಟ್ಟು ಅವರಿಗೆ ಪ್ರಜಾ ಹಕ್ಕುಗಳನ್ನು ದಯಪಾಲಿಸಬೇಕೆಂಬ ಒಂದು ಕಾನೂನು ಅಲ್ಲಿಯ ಸರ್ಕಾರದ ಅವಗಾಹನೆಗೆ ಬಂದಿದೆ !

ಇದನ್ನು ನಾವು ನಿರೋಧಿಸಲೇ ಬೇಕು. ಏಕೆಂದರೆ, ನಮ್ಮ ದೇಶದವರನ್ನು ಹೀಗೆಯೇ ಅವರು ಎಳೆದುಕೊಳ್ಳುತ್ತಾ ಹೋದರೆ, ೫೩೧೧೧೧೧ ವರ್ಷಗಳಲ್ಲಿ ನಮ್ಮ ದೇಶವೇ ಬರಿದಾಗುವುದು !

✤ ✤ ✤

"ವೆಸೂವಿಯಸ್ ಅಗ್ನಿಪರ್ವತ ಕೆಂಡದ ಹೊಳೆಯನ್ನು ಕಾರಿತು" (ಪತ್ರಿಕೆ)

ಬಿಸಿ ಬಿಸಿ ಇಡ್ಲಿ ಮೇಲೆ, ಸುಡಸುಡ ಸಾಂಬಾರುಬಿತ್ತು.

✤ ✤ ✤

ಮೊನ್ನೆ ಒಂದು ಶಾಲೆಯ ವಾರ್ಷಿಕೋತ್ಸವದಲ್ಲಿ ಅಧ್ಯಕ್ಷತೆ ವಹಿಸಿದ ಇನ್ಸ್ಪೆಕ್ಟರ್‌ರವರು ಭಾಷಣ ಮಾಡುತ್ತಾ, "ನೀವು ಇಲ್ಲಿ ಕಲಿಯುವ ಅನೇಕ ವಿಷಯಗಳು ನಿಮಗೆ ಮುಂದಿನ ಜೀವನಕ್ಕೆ ಬಹಳ ಸಹಾಯಕವಾಗಿವೆ. ಉದಾಹರಣೆಗೆ—ಏಳು ನಾಲ್ಕಲ ಇಪ್ಪತ್ತೆಂಟು, ಎಂಟಾರಲ ನಲವತ್ತೆಂಟು, ಒಂಬತ್ತೈದಲ........ಒಂಬತ್ತೈದಲ........ಇರಲಿ, ಹೀಗೆ ಚರಿತ್ರೆ, ಭೂಗೋಳ ಇಂಥ ಅನೇಕ ಉಪಯುಕ್ತ ವಿಷಯಗಳನ್ನು ನೀವು ಇಲ್ಲಿ ಕಲಿಯುವಿರಿ" ಎಂದು ಮುಂದಕ್ಕೆ ಉಪನ್ಯಾಸ ಮಾಡಿದರಂತೆ.

—o—

# "ಆದರೆ......"

ಎಷ್ಟೋ ಜನ ಪ್ರಸಿದ್ಧ ಪುರುಷರು ಬೇರೆ ಯಾವುದೊಂದು ಕಾರ್ಯಕ್ಷೇತ್ರದಲ್ಲೂ ಪ್ರಸಿದ್ಧಿ ಹೊಂದಿರಬಹುದಾಗಿತ್ತು. ವೀಣೆ ಶೇಷಣ್ಣನವರು ಚಲನಚಿತ್ರ ರಂಗದಲ್ಲಿ ಅದ್ವಿತೀಯವಾಗಿರಬಹುದಾಗಿತ್ತು. ರಾಜಕಾರಣ ಪಟು ಶ್ರೀಯುತ ಷೌಕತಾಲಿಯು ಸಾಹಿತ್ಯಶಿರೋಮಣಿಯಾಗಿದ್ದಿರಬಹುದಾಗಿತ್ತು. ಶ್ರೀಯುತ ರಾಜಾಜಿಯವರು ಸುಪ್ರಸಿದ್ಧ ವೈದ್ಯರಾಗಿರಬಹುದಾಗಿತ್ತು. ಹಾಗೆಯೇ ನಾನೂ ಒಳ್ಳೆಯ ಕತೆಗಾರನಾಗಿರಬಹುದಾಗಿತ್ತು.

ಆದರೆ........

ಅದೇ ಹೇಳುವುದಕ್ಕೆ ಹೊರಟಿದ್ದೆ. ನಾನೊಮ್ಮೆ ಉತ್ಕೃಷ್ಟವಾದ ಕಳ್ಳನ ಕತೆಯೊಂದನ್ನು ತ್ರೈಮಾಸಿಕ ಪತ್ರಿಕೆಯೊಂದರಲ್ಲಿ ಬರೆಯಲು ಆರಂಭಮಾಡಿದೆ. ಮೂರು ತಿಂಗಳಿಗೊಮ್ಮೆ, ಕಾಗದ ದೊರೆತಾಗ, ಅಚ್ಚುಗಾರನ ಮನೆಯಲ್ಲಿ ಅನಾನುಕೂಲವಿಲ್ಲದಾಗ, ಸಂಪಾದಕನಿಗೆ ತಾಪತ್ರಯವಿಲ್ಲದಾಗ, ಒಂದೊಂದು "ಮುಂದುವರಿಯುವುದು" ಭಾಗವು ಪ್ರಕಟನವಾಗುತ್ತಿತ್ತು. ಸುಮಾರು ನಾಲ್ಕಾರು ವರ್ಷಗಳಲ್ಲಿಯೇ ಕತೆಯು ಅತ್ಯುಗ್ರವೇಗದಿಂದ ಇಡೀ ಓದುಗ ಜನಾಂಗವನ್ನೇ ಯೋಚನಾಂದೋಲನದ ಶಿಖರಕ್ಕೆ ಒಯ್ದಿತ್ತು. ಹಲವಾರು ಓದುಗರು ಪೂರ್ತಿ ಕತೆಯನ್ನು ಓದಲೋಸುಗ ಪ್ರಾಕ್ತನ ಪುಸ್ತಕಾಲಯಕ್ಕೆ ಹೋಗಿ ಹಳೆಯ ಸಂಚಿಕೆಗಳನ್ನು ಓದಲಾರಂಭಿಸಿದರು. ಇನ್ನು ಕೆಲವರು ಹಳೆಯ ಸಂಚಿಕೆಗಳನ್ನು ಹುಡುಕ ಹೋಗಿ, ಹಳೇ ಹೋಟೆಲುಗಳನ್ನೆಲ್ಲಾ ಹಳೇ ಕಾಗದಗಳಿಗಾಗಿ ಶೋಧಿಸತೊಡಗಿದರು. ಜನಜೀವನವೇ ಅಲ್ಲೋಲ ಕಲ್ಲೋಲವಾಯಿತು.

ಮುಂದಿನ ಸಂಚಿಕೆಯಲ್ಲಿ ಕಳ್ಳಾಗ್ರೇಸರನು ನಾಯಕನ ಮನೆಗೆ ಹೋಗಿ ಆತನ ಹಾಸಿಗೆಯ ತಲೆದಿಂಬಿನ ಕೆಳಗಡೆ ಮುಚ್ಚಿಡಲ್ಪಟ್ಟಿದ್ದ ಸಹಸ್ರಾರು ರೂಪಾಯಿಗಳ ಬೆಲೆ ಬಾಳುವ ವಜ್ರ, ವೈಡೂರ್ಯ, ಗೋಮೇದಿಕ, ಚಿನ್ನ, ರತ್ನ ಇತ್ಯಾದಿಗಳನ್ನು ಕದಿಯುವ ಸನ್ನಿವೇಶ. ಕಳ್ಳಾಗ್ರೇಸರನ ಚಲನ ವಲನಗಳನ್ನು ಅಂದವಾಗಿ ವಿವರಿಸಿದ್ದೆ. ಪ್ರಕೃತ ಪರಿಸ್ಥಿತಿಯನ್ನು ಚೆಂದವಾಗಿ ಚಿತ್ರಿಸಿದ್ದೆ. ಸರಪರಾಜು ಇಲಾಖೆಯ ಯಾವನಾದರೂ ಈ ಚಿತ್ರವನ್ನು ಓದಿದ ಮೇಲೆ, ಅವನ ಮುಂದೆ ನಾನೇನು ಎಂದು ತಲೆಬಾಗುವಂತಿತ್ತು. ಯಾವ ವಿಮಾ ಕಂಪನಿಯವರಾದರೂ ಈ ಚೋರ ಏರ್ಪಾಡಿನ ಮುಂದೆ ನಾವೇನು ಎನ್ನುವಂತಿತ್ತು. ಯಾವ ಸುಂಕದ ಕಟ್ಟೆಯವನಾಗಲೀ ಸಮ್ಮತ ಹೊಡೆಯುವಂತಿತ್ತು. ಹಾಗೂ ಯಾವ ಸರ್ಕಾರವೂ ಕೂಡ ಈ ಲಪಟಾಕ್ರಮದ ಮುಂದೆ ನಮ್ಮ ತೆರಿಗೆಗಳೇನು ಎನ್ನುವಂತಿತ್ತು. ಹೀಗೆ ಕಳ್ಳತನದ ವಿಶಿಷ್ಟ ಸೊಬಗನ್ನೂ ಮನದಣಿಯುವಂತೆ ಮುಂದುವರಿಸಿದ್ದೆ.

ಆದರೆ........



*

ಮುಂದಿನ ಸಂಚಿಕೆಯ ಹೊತ್ತಿಗೆ ಹತ್ತಾರು ಜನರು ಸಂಪಾದಕರಿಗೆ ಕಾಗದ ಬರೆದಿದ್ದರು. ಎಲ್ಲ ಪತ್ರಗಳ ಸಾರಾಂಶವು ಒಂದೇಯಾದ್ದರಿಂದ, ಒಂದನ್ನು ಮಾದರಿಗಾಗಿ ಕೊಡುತ್ತೇನೆ.

"ಸಂಪಾದಕರಿಗೆ",

ಸ್ವಾಮಿ,

ತಮ್ಮ ಲೇಖಕರು ಬರೆದಿರುವ ಕತೆಯು ಸ್ವಲ್ಪವೂ ಸರಿಯಲ್ಲ. ಯಾವೊಬ್ಬ ಮುದ್ದಿಯೂ ತಲೆದಿಂಬಿನ ಕೆಳಗೆ ತನ್ನ ಒಡವೆ ವಸ್ತುಗಳನ್ನೆಲ್ಲಾ ಬಚ್ಚಿಡುವುದಿಲ್ಲ. ಅದರಲ್ಲೂ ಇಂತಹ ಸುಬುದ್ಧಿಯ ಕಥಾನಾಯಕನು ಹಾಗೆ ಮಾಡುವುದು ಕೇವಲ ಅಸಂದರ್ಭ; ಅನ್ಯಾಯ; ಅಸತ್ಯ.

ಇತಿ ನಿಮ್ಮವ,
**ಕೇಶವ.**

ನಾನು ಈ ಪತ್ರವನ್ನು ಓದಿದ ಕೂಡಲೇ ಕಿಚ್ಚಾದೆ. ರೇಗಿದೆ. ಕೂಡಲೆ ಕೆಂಪುಶಾಯಿಯಲ್ಲೇ ಒಂದು ಕಾಗದ ಬರೆದೆ.—ಪತ್ರಿಕಾ ಸಂಪಾದಕರಿಗೆ, ಒತ್ತಕ್ಷರದಲ್ಲೇ ಉದ್ವೇಗದಿಂದ ಬರೆದಿದ್ದೆ ಈ ರೀತಿಯಲ್ಲಿ:

ಸಂಪಾದಕ ಮಹಾಶಯರಿಗೆ—

ಸ್ವಾಮಿ,

ನಮ್ಮ ಓದುಗ ಮಹಾಶಯ ಕೇಶವ ಅವರು ಬರೆದ ಕಾಗದವನ್ನು ಓದಿದೆ. ತಲೆದಿಂಬಿನ ಕೆಳಗೆ ಆವರೌಲ್ಯ ವಸ್ತುಗಳನ್ನು ಬಚ್ಚಿಡುವುದು ಅಸಂದರ್ಭ, ಅನ್ಯಾಯ, ಅಸತ್ಯ ಎಂದು ಧುಂತಾಗಿ ಬರೆದಿದ್ದಾರೆ. ಇದರಿಂದ ಒಂದೇ ವಿಷಯವು ಗೊತ್ತಾಗುತ್ತದೆ ಕೇಶವರಿಗೆ ಪ್ರಪಂಚಜ್ಞಾನವಿಲ್ಲವೆಂದು ಯಾವ ಮುದ್ದಿಯೂ ಬಚ್ಚಿಡುವುದಿಲ್ಲ ಎಂದನ್ನುತ್ತಾರೆ. ಅವರ ಜಾಗೃತಿಯಾಗಲೆಂದು ಹೇಳುತ್ತಾನೆ. ಹಲವಾರು ವರ್ಷಗಳಿಂದಲೂ 'ತಮ್ಮ ವಿಧೇಯನು' ತಲೆದಿಂಬಿನ ಕೆಳಗೇ ತನ್ನ ಒಡವೆ ವಸ್ತುಗಳನ್ನು ಮುಚ್ಚಿಡುತ್ತಾನೆ.

ಇತಿ ತಮ್ಮ ವಿಧೇಯ,
**ಲೇಖಕ.**

ಈ ಕಾಗದವು ಮರುವರ್ಷವೇ ಪ್ರಚುರವಾಯಿತು. ಅದಾದ ಮೇಲೆ ಒಂದು ದಿನ ಪತ್ರಿಕಾ ಪ್ರಚಾರಕರಿಂದ ಒಂದು ಕಾಗದ ಬಂದಿತು.

ಲೇಖಕ ಮಹಾಶಯರಿಗೆ—

ತಮ್ಮ ಕತೆಯ ವಿಚಾರವಾಗಿ ಬಂದಿರುವ ಲಕ್ಷಾಂತರ ಕಾಗದಗಳನ್ನೂ ಜೋಡೆತ್ತಿನ ಗಾಡಿಯ ಮೇಲೆ ನಿಮ್ಮ ಮನೆಗೆ ಕಳುಹಿಸಿದ್ದೇವೆ. ಒಂದು ಕಾಗದ

ವನ್ನು ಮಾತ್ರ ನಾವೇ ಇಟ್ಟುಕೊಂಡಿದ್ದೇವೆ. ಅದನ್ನು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸುತ್ತೇವೆ.

ನಿಮ್ಮ,
ಪ್ರಚಾರಕರು.

ಜೋಡೆತ್ತಿನ ಗಾಡಿಯು ಬರಲಾರದೆ ಮನೆಗೆ ಬಂತು. ಬಂದ ಕಾಗದಗಳೆಲ್ಲಾ ಒಂದೇ ತೆರನಾದ ಅಭಿಪ್ರಾಯವನ್ನು ಹೊಂದಿದ್ದುವು. ಮಾದರಿಯ ಕಾಗದ ನೋಡಿ.

ಪತ್ರಿಕಾ ಸಂಪಾದಕರಿಗೆ—

ಸ್ವಾಮಿಾ,

ನಿಮ್ಮ ಲೇಖಕನಂತಹ ಸುಳ್ಳುಗಾರನು ಮೂರ್ಲೋಕಗಳಲ್ಲಿಯೂ ಇಲ್ಲ, ಹುಟ್ಟಿಲ್ಲ; ಹುಟ್ಟಲಾರ. ತಲೆದಿಂಬಿನ ಕೆಳಗೆ ಒಡವೆ ವಸ್ತುಗಳನ್ನು ಇಡುತ್ತೇನೆಂದು ಹೇಳಿದುದು ಕೇವಲ ಅಸತ್ಯ. ಸತ್ಯ, ಪ್ರೇಮ ಇವುಗಳಿಗೆ ನಿವಾಸಲಾಗಿರುವ ನಿಮ್ಮ ಘನ ಹೊಂದಿದ ಪತ್ರಿಕೆಯಲ್ಲಿ ಈ ರೀತಿಯ ಸುಳ್ಳು ಲೇಖಕರ ಕಾಗದ, ಕತೆಗಳನ್ನು ನೀವು ಪ್ರಕಟಿಸುವುದು ಕೇವಲ ಅವಮಾನಕರ. ಇನ್ನು ಮೇಲಾದರೂ ದೇವರು ನಿಮಗೆ ಒಳ್ಳೆಯ ಬುದ್ಧಿಯನ್ನು ಕೊಡಲಿ. ಸತ್ಯಕ್ಕಾಗಿ ಸಾಯುವಂತೆ ಮಾಡಲಿ.

ನಿಮ್ಮ,
ಇತ್ಯಾದಿ.

✦ ✦ ✦

## ಮುಂದಿನ ಸಂಚಿಕೆಯಲ್ಲಿ ಪ್ರಕಟವಾದ ಪತ್ರವಿದು.

ಸ್ವಾಮಿಾ ಸಂಪಾದಕರೇ,

ತಮ್ಮ ಲೇಖಕನು ಬರೆದಿದ್ದು ದಿಟ. ಲೇಖಕನು ಮಡ್ಡಿಯೆಂದು ನಾನು ಹೇಳಿದ್ದುಂಟು. ಆದರೆ, ಅದಕ್ಕೂ ಹೆಚ್ಚಿನ ಮಡ್ಡಿಯುವನು ಎಂಬುದು ಈಗ ನನಗೆ ತಿಳಿಯಬಂತು. ದಿಟವಾಗಲೂ ಆತನು ತನ್ನ ಒಡವೆ ವಸ್ತುಗಳನ್ನು ತಲೆದಿಂಬಿನ ಕೆಳಗೆ ಇಟ್ಟಿದ್ದನು.

ತಮ್ಮವ,
ಜಗ್ಗೋಜಿ.

✦ ✦ ✦

ಈಗ ಗೊತ್ತಾಯಿತೆ? ನಾನು ಸುಪ್ರಸಿದ್ಧ ಲೇಖಕನಾಗಬಹುದಾಗಿತ್ತು.

ಆದರೆ........

—o—



" ಅದರ ಹತ್ರ ಹೋಗ್ಬೇಡ ಕಣೋ, ನೆನ್ನೆ ನಮ್ತಂದೆನ ಕಚ್ಬಿಟ್ಟಂತೆ!
ಅವರು ಹೇಳ್ತಾ ಇದ್ರು........"

# ಆಳಾಗಿ ಎಲ್ಲರನು ಆಳುವನು ಅರಸಾಗಿ

---

ಸುಮಾರು ಹತ್ತುಗಂಟೆ. ಅಳುವ ಕೂಸಿಗೆ ಸಿಟ್ಟಿನಿಂದ ಎರಡುಕೊಟ್ಟು, ಅರೆಬೆಂದ ಅನ್ನವನ್ನು ಪರೀಕ್ಷೆಗೆ ಹೋಗುವ ಮಗನಿಗೆ, ಹಸೀ ಸಾದೆಯನ್ನು ಶಪಿಸಿ, ಕಣ್ಣೀರು ಹಾಕುತ್ತಾ ತಾಯಿ ಬಡಿಸುತ್ತಾಳೆ. "ಸಾರು ಇಲ್ಲದಿದ್ದರೆ ಬೇಡವ್ಮಾ, ಮಜ್ಜಿಗೆ ಹಾಕು, ಸಾಕು" ಎಂದು ಮಗ ತುತ್ತಿನಮೇಲೆ ತುತ್ತು ನುಂಗಲಾರದೆ ನುಂಗಿ ಓಡುತ್ತಾನೆ ಶಾಲೆಯ ಕಡೆಗೆ.

ಎಲ್ಲಿ ಗಂಟೆ ಹೊಡೆದುಬಿಡುತ್ತಾರೋ ಎಂದು.

✦ ✦ ✦

ಹತ್ತೂವರೆ ಗಂಟೆ. "ಅನ್ನ ಆಗದೇ ಇದ್ದರೆ ಕೆಡ್ತುಕಣೆ, ಅವಲಕ್ಕಿ ಮೊಸರ ನ್ನಾದರೂ ಕೊಡೆ. ಅದನ್ನು ತಿಂದೇ ಶಾಲೆಗೆ ಹೋಗುತ್ತೇನೆ. ಹೆಡ್ಮೇಷ್ಟ್ರು ಶಾಲೆಯ ಹತ್ತಿರವೇ ಮನೆಮಾಡಿದ್ದಾರೆ ಬೇಗ ಬಂದುಬಿಡುತ್ತಾರೆ' ಎಂದು ಲೊಟ ಗುಟ್ಟುತ್ತಾ ಸುಮಾರು ವಯಸ್ಸಿನ ಅಧ್ಯಾಪಕರು ರುಮಾಲನ್ನು ದಾರಿಯಲ್ಲೇ ಸುತ್ತಿ ಕೊಳ್ಳುತ್ತಾ ಓಡುತ್ತಾರೆ

'ಎಲ್ಲಿ ಗಂಟೆ ಹೊಡೆದುಬಿಡುತ್ತೋ ನಾನು ಹೋಗುವ ಮೊದಲೇ' ಎಂದು

✦ ✦ ✦

ಹತ್ತುಮುಕ್ಕಾಲು ಗಂಟೆ. ಶಾಲೆಯ ಆಚಿನ ಮಾವಿನ ತೋಪಿನಲ್ಲಿ ಶಾಮು, ರಾಮು, "ಬೇಗ ಕಿತ್ತುಕೊಳ್ಳೊ ಆ ದೋರೆಗಾಯಿನ, ಇಲ್ಲದಿದ್ದರೆ ಶಾಲೆಯಿಂದ ಹಿಂತಿರುಗಿ ಬರುವ ಹೊತ್ತಿಗೆ ಇನ್ನು ಯಾರಾದರೂ ಲಪಟಾಯಿಸಿಬಿಡುತ್ತಾರೆ.

ಅವಸರ ಆವಸರದಲ್ಲಿ ಮರ ಹತ್ತಲು ಹೋಗಿ ಕಪ್ಪು ಕಟ್ಟಿರುವೆಗಳಿಂದ ಕಡಿಸಿಕೊಳ್ಳುವ ಹೊತ್ತಿಗೆ

ಠಣ್ ಠಣ್ ಠಣ್ ಎಂದು ಗಂಟೆಯ ಶಬ್ದ.

"ಅಯ್ಯೋ ಗಂಟೆ ಹೊಡದೇ ಬಿಟ್ಟರಲ್ಲೋ ಜಾರೊ" ಎಂದು ಇಬ್ಬರು ಶಾಲೆಯ ಕಡೆಗೆ ಪೇರಿ.

✦ ✦ ✦

ಹನ್ನೆರಡೂವರೆ ಗಂಟೆ—ತಲೆ ಕೆರದೂ ಕೆರದೂ ಬೇಜಾರಾಗಿ ಹುಡುಗನು "ಇನ್ನೂ ಎಷ್ಟು ಹೊತ್ತಪ್ಪಾ, ಇನ್ನೂ ಗಂಟೆ ಹೊಡೆಯಲಿಲ್ಲ. ಯಾವಾಗಪ್ಪಾ ಇವನು ನನ್ನ ಬಿಡುಗಡೆಮಾಡೋದು" ಎಂದುಕೊಳ್ಳುತ್ತಾನೆ.

✦ ✦ ✦

ಹನ್ನೆರಡೂಮುಕ್ಕಾಲು ಗಂಟೆ. ಎಚ್ಚೆತ್ತ ಅಧ್ಯಾಪಕರು "ಅಯ್ಯೋ ದೇವ ಒಂದುಗಂಟೆ ಕುರ್ಚಿಯಲ್ಲಿ ಕೂತು ನಿದ್ರೆಮಾಡಿದರೇ ಹೀಗೆ ಸೊಂಟ ನೋವುತ್ತಲ್ಲಾ ಎಂದಿಗಪ್ಪಾ ಈಪಾಪಿ ಗಂಟೆ ಹೊಡೆಯುವುದು" ಎಂದು ಪೇದೆಯನ್ನು ಶಪಿಸುತ್ತಾರೆ.

ದೋರೆ ಮಾವಿನ ಕಾಯಿನ ಚಿತ್ರವನ್ನು ಮೇಜಿನಮೇಲೆ ಕೆತ್ತುತ್ತಿದ್ದ ಶಾಮು, ರಾಮುವಿಗೆ ಇದೊಂದೇ ಯೋಚನೆ ಎಂದಿಗೆ ಗಂಟೆ ಹೊಡೆಯುತ್ತಪ್ಪಾ, ಎಂದಿಗೆ ಹಿಂತಿರುಗಿ ಹೋಗಿ ಆ ಕಾಯನ್ನು ಗಿಟ್ಟಿಸುವುದು ಎಂದು.

✤ ✤ ✤

ಈ ಶಾಲೆಯ ಪೇದೆಯು ಸಾಧಾರಣ ಮನುಷ್ಯನಲ್ಲ ಎಲ್ಲೆಲ್ಲಿದ್ದವರನ್ನೂ ತನ್ನ ಗಂಟಾನಾದಕ್ಕೆ ಹೆದರುವಂತೆ ಮಾಡಿ ಹೇಗಿದ್ದವರನ್ನು ಹಾಗೆಯೇ ಪಾಶಹಾಕಿ ಎಳೆದಂತೆ ಶಾಲೆಗೆ ತರಿಸಿಯೇ ಬಿಡುತ್ತಾನೆ. ತಿರುಗಿ ಅವನು ಮುಕ್ತಿ ಗಂಟಾನಾದ ಮಾಡುವ ತನಕ ಯಾರೊಬ್ಬರೂ ಹೊರಗೆ ಹೋಗುವಂತಿಲ್ಲದಂತೆ, ನ್ಯಾಯಾಸ್ಥಾನದ ಬಲವಿಲ್ಲದೇ ಸೆರೆ ಹಾಕುತ್ತಾನೆ. ಹಸುಮಕ್ಕಳಾಗಲಿ, ಬಲಿತ ಅಧ್ಯಾಪಕರಾಗಲಿ, ಈ ಗಂಟಾನಾದಕ್ಕೆ ಶರಣು ಹೋಗಲೇ ಬೇಕು. ಹೆಸರಿಗೆ ಆಳು. ದಿಟವಾಗಿಯೂ ಆಳುವನು ಅರಸನಂತೆ.

"ಆಳಾಗಿ ಎಲ್ಲರನು ಆಳುವನು ಅರಸಾಗಿ"

—ಕೈಂಕಜೆ.

——o——

ಸಾರ್ವಜನಿಕ ಚುನಾವಣೆಗಳಾಗಬೇಕೆಂದು ಸರಕಾರದ ಆಜ್ಞೆಯಾಗಿದೆಯಂತೆ.

—ಅಂದಮೇಲೆ ಇನ್ನು ಕೆಲವು ದಿನವಾದರೂ ನಮ್ರತೆಯ ಮಾತುಗಳು ಇರುತ್ತವೆಯಲ್ಲ.

✤ ✤ ✤

ಅವರವರ ಹಣ ಎಂದರೆ ಅವರಿಗೆ ಬಹಳ ಆಶೆ ಎಂದು ಒಬ್ಬರ ಅಭಿಪ್ರಾಯ.

—ನಮ್ಮ ಸರ್ಕಾರಕ್ಕೆ ಹಾಗಲ್ಲ—ನಮ್ಮ ಹಣ ಕಂಡರೆ ಅವರಿಗೆ ಇನ್ನೂ ಆಶೆ.

✤ ✤ ✤

ಪ್ರಾಣಿದಯಾ ಸಂಘಕ್ಕೆ "ಕೂಗು ವಾಕ್ಯ" ಬೇಕಂತೆ.

"ಸರ್ವೇ ದನಾಃ ಸುಖಿನೋಭವಂತು." ಆಗಬಹುದೇ?

✤ ✤ ✤

# "ಕೆರೆಯ ನೀರನು ಕೆರೆಗೆ ಚೆಲ್ಲಿ...."

"ಕೆರೆಯ ನೀರನು ಕೆರೆಗೆ ಚೆಲ್ಲಿ.......ಕೆರೆಯ ನೀರನು ಕೆರೆಗೆ.......ಕೆರೆಯ ನೀರನು.......ಕೆರೆಯ ನೀರನು ಕೆರೆಗೆ ಚೆಲ್ಲೀ......."

ವಿಸೂವಿಯಸ್ ಜ್ವಾಲಾಮುಖಿಯ ಉತ್ಪಾಟನೆ, ಜಪಾನೀ ಬಾಂಬು ಧಾಳಿ, ಬಿಹಾರದ ಭೂಕಂಪಗಳ ತ್ರಿವೇಣಿಯೇ ನನ್ನ ಬಳಿ ಉದ್ಭವಿಸಿದಂತಾಗಿ ನಾನು ತತ್ತರಿಸಿ ಹೋದೆ. ಅದರಿಂದ ಚೇತರಿಸಿಕೊಳ್ಳುವುದಕ್ಕೆ ಎಷ್ಟು ವೇಳೆಯಾಯಿತೆಂದು ನೋಡುವುದಕ್ಕೂ ಚೈತನ್ಯವಿರಲಿಲ್ಲ!

ಏನಿದು ಪ್ರಳಯ ವೇಳೆಯ ಚಿಹ್ನೆ! ಬ್ರಹ್ಮದೇವನು ಅರಿತೋ ಮರೆತೋ ಕೊಟ್ಟ ಗಾರ್ಧಭಸ್ವರವನ್ನು ವಿಕಟಶ್ರುತಿ ಹೊರಡುವ ಅದೊಂದು ಹಾರ್ಮೋನಿಯಂ ಜೊತೆಗೆ ಸೇರಿಸಿ ಆ|ಎದುರು ಮನೆ ಹುಡುಗಿ ಹಾಡುತ್ತಿದಾಳೆ. ಶತಸಹಸ್ರ ಟ್ಯಾಂಕು, ಲಾರಿ 'ರಥಚಕ್ರಧ್ವನಿ ಚೀತ್ಕಾರ' ಗೈಯ್ಯುತ್ತಿದೆ ಹಾರ್ಮೋನಿಯಂ!

ಮತ್ತೆ ನಮ್ಮ ಇಂಗ್ಲೀಷಿನವರೆಂಥವರು! ಇಂಥ ಹಾರ್ಮೋನಿಯಂ ನಮ್ಮಲ್ಲೇ ಇರುವಾಗ ವ್ಯರ್ಥವಾಗಿ ಲಕ್ಷ ಲಕ್ಷ ಬಂದೂಕ, ಲಾರಿ, ಏರೋಪ್ಲೇನುಗಳನ್ನು ಉಪಯೋಗಿಸುತ್ತಿದಾರಲ್ಲ! ಅದರ ಬದಲು ಇದನ್ನೇ ರಣರಂಗಕ್ಕೆ ರವಾನಿಸಿ, ಒಂದು ಸಲ ಅದರ ಮೇಲೆ ಕೈಯಾಡಿಸಿದರೆ, ಏಳು ಮೈಲಿ ಸುತ್ತಳತೆಯಲ್ಲಿರುವ ಪ್ರತಿಯೊಬ್ಬ ಜಪಾನೀಯನೂ ಆಯುಧಗಳನ್ನು ನಿಂತಲ್ಲೇ ಬಿಸಾಡಿ, ಧೃತಿಗೆಟ್ಟು ದಿಕ್ಕುಕಾಣದೆ, ಬದುಕಿದೆಯಾ ಬಡಜೀವವೇ ಎಂದು ಓಡುವ ಗಡಿಬಿಡಿಯಲ್ಲಿ ಕಾಲ್ತೊಡರಿ ಎಡವಿ ಮುಗ್ಗರಿಸಿ ಪೆಸಿಫಿಕ್ ಮಹಾಸಾಗರದಲ್ಲಿ "ಬುಳು ಬುಳು ಮುಳುಗುತ ಹೆಣವಾಗಲ್ಲಿಯೆ" ತೇಲುವುದಂತೂ ಖಂಡಿತ!!

ಪ್ರಜ್ಞೆ ಬಂದ ಮೇಲೆ ಹಾಗೇ ಯೋಚಿಸಿದೆ. ತ್ರಿವೇಣೀ ಮಹಾತ್ಮೆಯುಳ್ಳ ಆ ಹಾರ್ಮೋನಿಯಮನ್ನು ನಾಶಮಾಡುವುದು ಹೇಗೆಂದು ಚಿಂತಿಸಿ ಕಡೆಗೆ ಹುಡುಕಿದೆ ಉಪಾಯ!

ಮಾರನೇ ದಿನ ಮಗುವಿನ ಹುಟ್ಟಿದ ಹಬ್ಬವೆಂದು ಸ್ವಲ್ಪ ಹೆಚ್ಚಿನ ಅಡಿಗೆ ಮಾಡಿದ್ದಳು ನನ್ನಾಕೆ. ಸರಿ, ಅದೇ ನೆವದಿಂದ ಎದುರು ಮನೆಯ ತ್ರಿವೇಣೀ ಮಾಲೀಕರನ್ನು ಊಟಕ್ಕೆ ಕರೆದು ಪರಿಚಯ ಮಾಡಿಕೊಂಡೆ. ತಾಂಬೂಲ ಹಾಕಿಕೊಳ್ಳುವಾಗ ಸಂಗೀತದ ಕಡೆ ಮಾತು ಹೊರಳಿಸಿ, ನನಗೆ ಜರೂರಾಗಿ ಒಂದು ಹಾರ್ಮೋನಿಯಂ ಬೇಕಾಗಿದೆಯೆಂದೂ, ಈಗಿನದಕ್ಕಿಂತ ಒಳ್ಳೆಯದೊಂದನ್ನು ಬಹಳ ಸುಲಭ ಖರೀದಿಗೆ ಅವರಿಗೆ ಬೇಗನೇ ಕೊಡಿಸುವೆನೆಂದೂ ಹೇಳಿ, ಅಭಯ ಪ್ರದಾನ ಮಾಡಿ ಎಂಬತ್ತು ರೂಪಾಯಿಗೆ ಆ ಹಳೇ ಹಾರ್ಮೋನಿಯಮನ್ನು ಕೊಂಡುಕೊಂಡೇ ಬಿಟ್ಟೆ! ಇನ್ನದರ ಅಂತ್ಯ ಸಂಸ್ಕಾರ ನಡೆಸಲೋಸುಗ ಐದು ದಿನಗಳ ರಜಕ್ಕೆ ಬರೆದು ಇನ್ನೂರು ಚಿಲ್ಲರೆ ಮೈಲಿ ದೂರವಿರುವ ಮದ್ರಾಸಿಗೆ ತೆರಳಿದೆ!

ಅಲ್ಲಿ ನನ್ನ ಗೆಳೆಯ ರಂಗಸಾಮಿ ಇದ್ದ. ಅದನ್ನು ಅವನಿಗೆ ತೋರಿಸಿ ಹೊಗಳಿ, ದುಡ್ಡನ್ನು ನಿಧಾನವಾಗಿ ಕೊಡಬಹುದೆಂದು ಧೈರ್ಯ ಹೇಳಿ ಹತ್ತು ರೂಪಾಯಿಗಳಿಗೆ ಅವನಿಗೆ ಟೋಪಿ ಹಾಕೇಬಿಟ್ಟೆ! ಊರಿಗೆ ವಾಪಸು ಬಂದದ್ದೂ ಆಯಿತು.

ಆ ಮೇಲೆ ಐದಾರು ದಿನಗಳ ತನಕ ಯಾವ ತಾಪತ್ರಯವೂ ಇಲ್ಲದೆ ಖುಷಿಯಾಗಿ ನಿದ್ದೆ ಬಂತು.

ಏಳನೇ ದಿನ ಬೆಳಗಿನ ಝಾವ ಇದ್ದಕ್ಕಿದ್ದ ಹಾಗೇ ಸಿಡಿಲು ಬಡಿದಂತೆ ಎಚ್ಚರವಾಯಿತು! ಕಣ್ಣುಜ್ಜಿಕೊಂಡು ಹಾಗೇ ಆಲಿಸಿದೆ—"ಕೆರೆಯ ನೀರನು ಕೆರೆಗೆ ಚೆಲ್ಲೀ........ಕೆರೆಯ ನೀರನು........ಕೆರೆಯ........ಕೆರೆಯ ನೀರನು ಕೆರೆಗೆ ........"

ಯಥಾ ಪ್ರಕಾರ ತ್ರಿವೇಣೀ ಸಂಗಮ! ನಾನು ಹಲ್ಲು ಹಲ್ಲು ಕಡಿಯುತ್ತ ಎರಡು ಕೈಯಿಂದಲೂ ಕಿವಿಗಳನ್ನು ಮುಚ್ಚಿಕೊಂಡು ಈಚೆ ಬಂದೆ. ಅಷ್ಟು ಹೊತ್ತಿಗೆ ರಂಗಸಾಮಿ ನಮ್ಮ ಮನೆ ಕಡೆಗೇ ಬರುತ್ತಿದ್ದ!

"ಏನೋ ಇದು? ಯಾವತ್ತು ಬಂದೆ?" ಎಂದೆ.

"ಈ ತಾಸಿ ಒಂದು ಘಂಟೆ ಆಗಿರಬಹುದು" ಎಂದ.

"ಎಲ್ಲಿ ಉಳಿದುಕೊಂಡಿದ್ದೀಯ?"

"ಇದೇ ಎದುರು ಮನೆ. ನಮ್ಮ ಮಾವನದು! ಇನ್ನೇನು ದೀಪಾವಳಿ ಬಂತಲ್ಲಪ್ಪಾ, ಅದಕ್ಕೆ ಬಾ ಅಂದಿದ್ದರು. ಬರುವಾಗ ಒಂದು ಒಳ್ಳೇ ಹಾರ್ಮೋನಿಯಂನ ತೆಗೆದುಕೊಂಡು ಬನ್ನಿ ಅಂತಲೂ ಬರೆದಿದ್ದರು. ನೀನು ನನಗೆ ಮಾರಿದೆಯಲ್ಲ ಒಳ್ಳೆಯದೆಂದು ಹೇಳಿ, ಅದನ್ನೇ ಅವರಿಗೆ ಕೊಟ್ಟಿದ್ದೇನೆ. ಆದರೆ ಒಂದು ಮಾತು. ಅದನ್ನು ನಿನ್ನಿಂದ ತೆಗೆದುಕೊಂಡಿದ್ದೆ ಅಂತ ಮಾತ್ರ ದಯವಿಟ್ಟು ನಮ್ಮ ಮಾವನವರಿಗೆ ಹೇಳಬೇಡ. ಗೊತ್ತಾಯಿತೆ ....."

ನನಗೆ ಗೊತ್ತಾದುದಿಷ್ಟು! ವಿಸೂವಿಯಸ್ ಉತ್ಪಾಟನೆ ಇನ್ನೂ ಶಾಂತವಾಗಿರಲಿಲ್ಲ. ಜಪಾನಿನವರು ಯುದ್ಧದಲ್ಲಿ ಇನ್ನೂ ಸೋತಿರಲಿಲ್ಲ! ಬೀಹಾರದ ಭೂಕಂಪವಂತೂ ಇನ್ನೂ ಮುಕ್ತಾಯವಾಗಿರಲಿಲ್ಲ!

ಕಾರಣ?

"ಕೆರೆಯ ನೀರನು ಕೆರೆಗೆ ಚೆಲ್ಲೀ........ಕೆರೆಯ ನೀರನು........ಕೆರೆಯ ನೀರನು ಕೆರೆಗೆ........ಕೆರೆಯ ನೀರನು ಕೆರೆಗೆ ಚೆಲ್ಲೀ........"

—ವಿ. ವಿ. ಸು.

———o———

# ಗುಟ್ಟು ಗುಟ್ಟು

ಶಿವಪೂಜೆಯಲ್ಲಿ ಕರಡಿ ನುಗ್ಗಿದ ಹಾಗೆ ನನ್ನ ಮನೆಯೊಳಕ್ಕೆ ಒಬ್ಬ ಮುದುಕ ನುಗ್ಗಿದಾನೆ. ಮೂರು ತಿಂಗಳಾಯಿತು ಈ ಅನಾಹುತ ನಡೆದು. ಹೇಗೋ ನುಸುಳಿ, ತನ್ನ ಸ್ಥಾನವನ್ನು ಬಲಪಡಿಸಿಕೊಂಡುಬಿಟ್ಟ; ಯಾವುದೋ ಬಾದರಾಯಣ ಸಂಬಂಧ, ಅವಳ ಕಡೆ. ಅದಕ್ಕೇ ತಾಪತ್ರಯ! ನನ್ನ ಕಡೇದಾಗಿದ್ದರೆ, "ಕುಮುದಃ ಕುಂದರಃ ಕುಂದಃ" ಅಂತ ನೂಕಿಬಿಡುತ್ತಿದ್ದೆ. ಅವಳ ನೆಂಟರಾದ್ದರಿಂದ ಉಪಾಯಾಂತರ ಹುಡುಕಬೇಕಾಯಿತು.

ಹುಡುಕಿದೆ. "ಗೋದಾವರಿ ಪುಷ್ಕರಂ" ಎಂಬ ಜಾತ್ರೆಗೆ ಹೋಗಬಾರದೆ, ಎಂದು ಕೇಳಿದೆ. ಅದರ ವಿಷಯವಾಗಿ ಪೇಪರಲ್ಲಿ ಬಂದದ್ದನ್ನೆಲ್ಲ ಓದಿ ತೋರಿಸಿದೆ. ಬಹು ಜನ ಸೇರುತ್ತಾರೆ, ಗಂಗೆ ಅಂದು ಅಲ್ಲೇ ಆವಿರ್ಭವಿಸುತ್ತಾಳೆ, ಕಲಿಯುಗದ ಕಲ್ಮಷವೆಲ್ಲ ತೊಲಗುತ್ತೆ, ವೈತರಣೀ ವ್ಯಸನವೇ ತೊಡೆದುಹೋಗುತ್ತೆ, ಎಂದೆಲ್ಲ ಹೊಗಳಿದೆ. ಅವರು ಕಿವಿಯಾಡಿಸುತ್ತಾ ತಲೆದೂಗಿದರು. ತೊಲಗಬಹುದೆಂಬ ಆಸೆ ಮೂಡಿತು. "ಇವತ್ತಿದ್ದವನು ನಾಳೆ ಎಲ್ಲೋ, ಎಂಬ ಕಾಲ ಈಗ....ಯುದ್ಧ ಮುಗಿದ ಮೇಲೆ ಯಾವ ಇನ್‌ಫ್ಲೂಯೆನ್‌ಸಾ ಕಾದಿದೆಯೋ? ಎಲ್ಲೆಲ್ಲೂ ಆಗಲೇ ಡಾಕ್ಟರುಗಳು, ಸ್ಯಾನಿಟರಿ ಇನ್‌ಸ್ಪೆಕ್ಟರುಗಳು, ಬೊಂಬು, ಹಗ್ಗ, ಬೆರಣಿ ಇವುಗಳ ವ್ಯವಸ್ಥೆ ಆಗುತ್ತಿವೆಯಂತೆ" ಅಂದೆ. "ಯಾಕೆ ಯೋಚನೆ ಮಾಡುತ್ತೀದೀರಿ? ಹಣವೇನು ಮಹಾ! ರೂಪಾಯಿಗೆ ಎರಡುಕವಡೆ ಕೂಡ ಬೆಲೆ ಇಲ್ಲದ ಕಾಲ.... ಅದರ ಯೋಚನೆ ಬಿಡಿ. ಪ್ರಯಾಣ ಕಷ್ಟ, ಅಂತಲೇ? ನಾವು ಪ್ರಯಾಸಪಟ್ಟಷ್ಟೂ ದೇವರಿಗೆ ಪ್ರೀತಿ. ಅದಕ್ಕೋಸ್ಕರವೇ ದೇವರು ಬೆಟ್ಟದ ತುದಿಯಲ್ಲಿ ಕೂತಿರುವುದು?" ಅಂದೆ. "ಆದರೂ, ಶೀನು!, ವಯಸ್ಸಾಯಿತು........ಆಯಾಸ........ ಸುಸ್ತು........ಒಬ್ಬಂಟಿಗನಾಗಿ ಓಡಾಡುವುದಕ್ಕೆ ಧೈರ್ಯ ಸಾಲದು....... ಶ್ರಮ..... ಇಲ್ಲಿ ಈ ಮನೆಯಲ್ಲಿ ನನಗೇನು ಕಡಿಮೆ? ಸರಸು ದಿವ್ಯನಾಗಿ ಅಡಿಗೆ ಮಾಡಿ ಹಾಕುತ್ತಾಳೆ........ಆನಂದವಾಗಿದೇನೆ........ಮಧ್ಯಾಹ್ನ ಎರಡು ಗಂಟೆ ಹೊತ್ತು ನಿದ್ದೆ ತೆಗೆದೆ ಅಂದರೆ, ಸಂಜೆ ಹೊತ್ತಿಗೆ ಹೊಸ ಆಸಾಮಿ ಆಗ್ತಿದೇನೆ...... ದೇವರೇನು? ಇಲ್ಲಿಲ್ಲವೆ? ಮನವೇ ಗಂಗಾ! ಮನೆಯೇ ಕಾಶಿ!" ಅಂತ ಕೂತೇಬಿಟ್ಟರು.

ಸಿಟ್ಟುಸಿರಿಟ್ಟೆ. "ಯುದ್ಧಕಾಲೇ ವೃದ್ಧ ಪೋಷಣಂ" ಎಂಬ ಹಾಗೆ ಇದೆಲ್ಲಿ ಗಂಟುಬಿತ್ತು ಶನಿ, ಅಂತ ಶಪಿಸಿದೆ. ರೇಷನ್ ಕಾಲ! ಎಷ್ಟು ಬೆಣ್ಣೆ ಹಚ್ಚಿದರೂ ಬೆಣ್ಣೆ ಸಿಗದ ಕಾಲ! ಈತನ ಶುಶ್ರೂಷೆಯಲ್ಲೇ ಸರಸು ಸದಾ ಓಡಾಡುತ್ತಿದಾಳೆ. ಅವಳ ಚಿಕ್ಕಪ್ಪನ ಅಳಿಯನ ಅಣ್ಣನಂತೆ....... ರಿಟೈರ್ಡ್ ಸಬ್ ರಿಜಿಸ್ಟ್ರಾರಂತೆ! ನನ್ನನ್ನ ಕೇವಲ ಒಂದು ದುಡಿಮೆಯ ದನದ ಸ್ಥಿತಿಗಿಳಿಸಿದಾಳೆ........ನನ್ನ ಮನೆಯೇನು? ಅಶಕ್ತ ಪೋಷಕ ಸಂಘವೇ, ಅನಾಥಾಲಯವೇ? ವೃದ್ಧಾಶ್ರಮವೇ?

ಅನ್ನ ದಾನ ಸಭೆಯೇ? ಥೂ! ಮತ್ತೊಂದು ಉಪಾಯ ಹುಡುಕಲೇ ಬೇಕು, ಅಂತ ತಲೆ ಕೆರೆದೆ.

ಆತ ಕೂಡ ಎಂಥ ಅಯೋಗ್ಯ ಅಂತ ನೀವು ಕೊಂಚ ಯೋಚಿಸಿ! ತನ್ನ ತಮ್ಮನ ಮಾವನ ಅಣ್ಣನ ಮಗಳ ಮನೆಯಲ್ಲಿ ಸೇರಿಕೊಂಡು ಹೆಗ್ಗಣದ ಹಾಗೆ ಮೂರು ಹೊತ್ತೂ ಚೊಕ್ಕಭೋಜನ ಹೊಡೆಯುವುದು ಯಾವ ನ್ಯಾಯ? ಯಾವ ಧರ್ಮಶಾಸ್ತ್ರದಲ್ಲಿ ಹೀಗೆ ಹೇಳಿದೆ? ತಾನಾಗಿಯೇ ತಿಳಿದುಕೊಳ್ಳಬೇಕಾದ್ದನ್ನ ನಾನೇ ಸೂಚನೆ ಕೊಟ್ಟಾಗ ಗಂಟು ಮೂಟೆ ಕಟ್ಟಿ 'ಹೊರಟೆ' ಅನ್ನಬೇಡವೆ? ಪ್ರಾಣಿ!

ಊಹುಂ. ಅಲುಗಾಡಿಸಿದಷ್ಟೂ ಬಲವಾಗಿ ಬೇರು ಬಿಡೋದೇ? ರೇಡಿಯೋ ಸುದ್ದಿ ಅಂತ ಹೇಳಿ ಬಾಂಬು ಗೀಂಬು ಅಂತ ಎರಡು ಮೂರು ದಿನ ಯದ್ವಾತದ್ವಾ ಹೆದರಿಸಿದೆ. "ಜಪ್ಪಯ್ಯ" ಅಂದ, ಮುದುಕ! "ಈ ಘಟ ಬಿದ್ದರೆ ಬೀಳಲಿ" ಅಂದ

ಅವರ ಊರಿಂದ ಅವರ ಚಿಕ್ಕ ತಮ್ಮನಿಗೆ ನ್ಯೂಮೋನಿಯಾ ಅಂತ ತಂತಿ ತರಿಸಿದೆ. "ಅಯ್ಯೋ! ಅವನಂಥ ಅಯೋಗ್ಯ ಇದ್ದರೇನು? ಹೋದರೇನು" ಅಂತ ತಂತಿಯನ್ನೇ ಹರಿದು ಬಿಸಾಕಿದ! ಕಲ್ಲೆದೆಯ ಕದೀಮ!

ಅವರ ಹಾಸಿಗೆಯೊಳಕ್ಕೆ ತಗಣೆಗಳನ್ನು ಸೇರಿಸಿದೆ. ಗೊರಕೆ ಇನ್ನೂ ಉಗ್ರವಾಯಿತು.

ಮನೆಯಲ್ಲಿ ದೆವ್ವ ಹೊಕ್ಕಿದೆ, ರಾತ್ರಿ ಪಾತ್ರೆಗಳನ್ನ ರೊಯ್ ಅಂತ ಮೂಲೆ ಮೂಲೆಗೂ ಎಸೆಯುತ್ತದೆ, ಅಂತ ನಾನೇ ಗಲಾಟೆ ಮಾಡಿದೆ. ನನ್ನ ಹಣೆಗೆ ವಿಭೂತಿ ಹಚ್ಚಿದರು. ನನಗೆ ಚಾಮರ ಪ್ರಯೋಗ ಮಾಡುತ್ತೇನೆ ಅಂತ ಹೆದರಿಸಿದರು. ನಾನು ಸುಮ್ಮನಾದೆ.

ನನಗೆ ಸಿಡುಬು ಬರುವ ಸಂಭವ ಕಾಣುತ್ತಿದೆ, ಅಂದೆ! "ನನಗೆ ಆಗಲೇ ಸಿಡುಬಾಗಿದೆ! ನಿನಗೆ ಬಂದರೆ ನಾನೇ ಶುಶ್ರೂಷೆ ಮಾಡುತ್ತೇನೆ" ಅಂತ ಸಮಾಧಾನ ಪಡಿಸಿದರು.

ನಾನು ಮನೆಯಲ್ಲಿಲ್ಲದ ಸಮಯದಲ್ಲಿ ಆ ಮುದುಕನ ಕೈಗೆ ಯಾರೋ ಒಬ್ಬನಿಂದ ಒಂದು ಕಾಗದ ಕೊಡಿಸಿದೆ. "ಸ್ವಾಮಿ! ಈ ದಿವಸ ರಾತ್ರಿ ೧೨ ಗಂಟೆಗೆ ಸರಿಯಾಗಿ ನಾನೂ ನನ್ನ ಗೆಳೆಯರಾದ ಕರಿಯಕುಂಟ, ಮೋಟ, ಕಿವುಡ ಮುತ್ತಾದವರೂ ಕೈಪಿರಂಗಿ ಸಹಿತವಾಗಿ ನಿಮ್ಮ ರೂಮಿಗೆ ಬರುತ್ತೇವೆ—ನೀವು ನನ್ನ ಕೈಗೆ ೧೦೦೦೦ ರೂಪಾಯಿ ಕೊಡದೆ ಹೋದ ಪಕ್ಷದಲ್ಲಿ ನಿಮ್ಮನ್ನು ಹೊಡೆದು ಸಾಯಿಸುತ್ತೇವೆ. ಈ ಸಂಗತಿಯನ್ನು ನೀವು ಯಾರಿಗೂ, ಮುಖ್ಯವಾಗಿ ಪೋಲೀಸಿನವರಿಗೂ ತಿಳಿಸಬಾರದು. ಹುಷಾರ್! ಹಣ ಸಿದ್ಧವಾಗಿರಲಿ! ಪಿರಂಗಿಯ ಜ್ಞಾಪಕವಿರಲಿ!" ಎಂದು ಅದರಲ್ಲಿ ಬರೆದಿತ್ತು.

ಮುದುಕ ಹೆದರಿದ. ಕಡೆಗೂ ಕಂಬಿ ಕಿತ್ತ. ಆರಾರಾ ಕಛೇರಿಯಿಂದ ನಾನು ಮನೆಗೆ ಬರುವ ವೇಳೆಗೆ ಸರಿಯಾಗಿ ಆತ ಗಾಡಿ ಹತ್ತುತ್ತಿದ್ದ. "ಏನಿದು, ಇಷ್ಟು ಅವಸರವಾಗಿ! ಎಲ್ಲಿಗೆ?" ಅಂದೆ. ನನ್ನನ್ನೇ ದುರುಗುಟ್ಟಿಕೊಂಡು ನೋಡುತ್ತಾ "ಏನೂ ಇಲ್ಲ! ಹಳ್ಳಿಯ ಕಡೆ ಹೊರಟೆ........ಕೊಂಚ ತುರುತ್ ಕೆಲಸ" ಎಂದು ಒದರಿದ.

ಎದೆಯಿಂದ ಹೊರಹೊಮ್ಮಿದ ನಗುವನ್ನು ತಡೆದು, ನಾನು ಒಳನುಗ್ಗಿದೆ. "ಸರಸೂ! ಯಾಕೆ ನಿಮ್ಮ ನಂಟ ಮಹಾಶಯ ಪ್ರಯಾಣ ಬೆಳೆಸಿದ್ದು?" ಅಂದೆ. ಅವಳು ಅಳುತ್ತಾ ನನ್ನ ಮುಂದೆ ಬಂದು ನಿಂತಳು. ಹೀಗೆ ಮಳೆ, ಮಿಂಚು, ಸಿಡಿಲು, ಗುಡುಗು ಆಗಿಯೇ ಆಗುತ್ತೆ ಅಂತ ನಾನೂ ನಿರೀಕ್ಷಿಸುತ್ತಿದೆ.

"ಯಾಕೆ? ಸರಸೂ" ಅಂದೆ.

"ತುಂಬ ಚೆನ್ನಾಗಿದೆ, ನಿಮ್ಮ ನಡತೆ! ಅವರನ್ನ ಇಲ್ಲಿಂದ ಓಡಿಸಬೇಕು ಅಂತ ನೀವೂ ಕಳ್ಳಕಾಕರಾದಿರಾ? ನಿಮ್ಮ ಬರವಣಿಗೆ ಅಂತ ಅವರಿಗೆ ಗೊತ್ತಾಗದೆ ಇರುತ್ತದೆಯೇ? ಆ ಕಾಗದ ನೋಡುತ್ತಲೂ ಅವರಿಗೆ ನಿಮ್ಮ ಹಿಂದಿನ ಮಾತೆಲ್ಲ ಅರ್ಥವಾಯಿತಂತೆ!"

"ಹಾಗಾಗಬೇಕು! ಆ ಕಾಗದ ಕಳುಹಿಸದೆ ಇದ್ದರೆ, ಪ್ರಾಣಿ ಇಲ್ಲಿಂದ ಕದಲುತ್ತಿತ್ತೇ? ಅವನಿಗೇನು ನಷ್ಟ, ರಸಕವಳ ಹೊಡೆಯುವಾಗ! ದುಡಿದು ತರುವವನಿಗೆ ತಾನೆ ಗೊತ್ತು, ಬೆವರಿನ ಬೆಲೆ!"

"ಅವರೇನು ಇಲ್ಲಿ ಧರ್ಮಕ್ಕೆ ತಿನ್ನುತ್ತಿರಲಿಲ್ಲ. ಇಲ್ಲಿ ಊಟಮಾಡುತ್ತಿದ್ದ ಖರ್ಚಿಗೆ ಅಂತ ತಿಂಗಳು ತಿಂಗಳು ಅವರ ಪೆನ್ಷನ್ ೫೦ ರೂಪಾಯಿನೂವೇ ನನ್ನ ಹೆಸರಿನಲ್ಲಿ ಬ್ಯಾಂಕಿನಲ್ಲಿಡುತ್ತಿದ್ದರು........ನನ್ನ ಹೆಸರಿನಲ್ಲಿ ಒಂದು ಮನೆ ಕೊಂಡು ಕೊಳ್ಳಬೇಕು, ಅವರ ಮಗನಿಗೆ ನಮ್ಮ ಚಿನ್ನೂನ ತಂದುಕೊಳ್ಳಬೇಕು, ಅಂದಿದ್ದರು ........ಈಗ ಅದೆಲ್ಲ ಹಾಳಾಯಿತು ನಿಮ್ಮ ದುರ್ಬುದ್ಧಿಯಿಂದ......."

ನಾನು ಹಾಗೆಯೇ ನೆಲದ ಮೇಲೆ ಕುಕ್ಕರಿಸಿದೆ! ಗಂಡ ಹೆಂಡತಿ ಒಬ್ಬರಿಗೊಬ್ಬರು ಗುಟ್ಟು ಗುಟ್ಟಾಗಿದ್ದರೆ, ಇಂಥದ್ದೇ ಆಗೋದು, ಅಂತ ತಲೆಯ ಮೇಲೆ ಕೈ ಇಟ್ಟೆ.

—ನಾ. ಕ.

---

# ಅನರ್ಥಕೋಶ

ಐಬು : ಇದು ಏನು ಎಂದು ಯಾರಿಗೂ ಗೊತ್ತಾಗಬಾರದು

ಐಲು : " ಬ್ರಿಟಿಷ್ ಐಲ್ಸ್ " ಎಂಬುದನ್ನು ಗಮನಿಸಿ.

ಐಸ್ : ಆಧುನಿಕ ಕವನಸಂಗ್ರಹಗಳನ್ನೋದುವಾಗ ವಾಚಕರು ತಲೆಯ ಮೇಲಿರಿಸಿಕೊಳ್ಳಬೇಕಾದ ವಸ್ತು.

ಒಗ್ಗಟ್ಟು : ಏನೇಬರಲಿ, ಒಡೆದೇಹೋಗಲಿ, ಇದರ ಕೂಗುಮಾತ್ರ ಕೇಳಿಬರಲಿ

ಒಗ್ಗರಣೆ : ಉಂಡಬಾಯಿಗೆ ಮಾಡಬೇಕಾದ ಉಪಚಾರ

ಒಣನಿರಾಸೆ : ಗಂಡಸ್ತನದ ಪಿಂಡ ಪ್ರದಾನ

ಒಬ್ಬಟ್ಟು ; ಅತ್ತು ಕರೆದು ಔತಣಮಾಡಿಸಿಕೊಂಡಾಗ ನಮಗೆ ಸಿಗುವ ಭಕ್ಷ್ಯವಿಶೇಷ

ಒಲೆ : " ಮಡದ ''ನಾದ ಗಂಡಸು ಸಂಪಾದಿಸಿ ತಂದದ್ದನ್ನೆಲ್ಲ " ಮಡದಿ " ಎಂಬ ಹೆಣ್ಣು ಹಾಳುಮಾಡುವ ಕುರುಭೂಮಿ

ಒಲ್ಲೆ : ನಿಷೇಧಾರ್ಥಸೂಚಕ........ಆದರೆ, " ಒಲ್ಲೆ, ಅಂದ್ರೆ ! " ಎಂಬ ನಲ್ಲೆಯಮಾತಿಗೆ " ಆಗಬಹುದು " ಎಂಬುದೇ ಅರ್ಥ.

ಒಂಟೆ : ಉಷ್ಟ್ರಾವಕ್ರ ಮಹರ್ಷಿಗಳ ವಾಹನ

ಓಣಿ : ಸಾಲಗಾರರ ಕಾಟದಿಂದ ತಪ್ಪಿಸಿಕೊಳ್ಳುವ ಸಲುವಾಗಿ ಮುನಿಸಿ ಪಾಲಿಟಿಯವರು ಮಾಡಿರುವ ಉಪಾಯ

ಓತಿಕ್ಯಾತ : ಸಮಯಸನ್ನಿವೇಶವರಿತು ಬಣ್ಣಬದಲಾಯಿಸುವ ಪ್ರಾಣಿ ; ರಾಜ್ಯತಂತ್ರಜ್ಞ

ಓದು : ಓನಾಮದಿಂದ ಪ್ರಾರಂಭಿಸಿ ದುಃಖದವರೆಗೆ

ಓರಗಿತ್ತಿ : ಸಂಸಾರದೊಳಗಿನ Fifth columm ನಾಯಕಿ ; ಪಂಚಾಂಗಿ

ಓಂ : ಅನಾದಿಭಾರತೀಯನ ಮೊತ್ತಮೊದಲಿನ ತೇಗು

—ಕಾರಂತ.

——o——

# ಹಳ್ಳಿಯಲ್ಲಿ ಲೇಖನ ಬರೆಯುವುದು

ಸ್ವಾಮಿ,

ಕೊರವಂಜಿಯನ್ನು ಓದಿದಾಗಿನಿಂದ ನಾನೂ ಒಂದು ಹಾಸ್ಯಲೇಖನವನ್ನು ಬರೆದು ನಿಮ್ಮ ಕಸದ ಬುಟ್ಟಿಗೆ ಹಾಕಿಯೇಬಿಡಬೇಕೆಂದು ನಿರ್ಧರಿಸಿದೆ ಇದೇ ಆ ಪ್ರಯತ್ನ. ನೀವಾದರೂ ಅದನ್ನು ಓದುತ್ತೀರೆಂಬ ದುರಾಶೆ ಇದೆ

ನಿಮ್ಮವ,.....ಶಿವು.

✦ ✦ ✦

ರಜ ಬಂದ ಕೂಡಲೆ ನಮ್ಮ ಸೋದರತ್ತೆಯ ಊರಿಗೆ ಹೋಗಿ ಹದಿನೈದು ದಿನಗಳು ಹಳ್ಳಿ ವಾಸಮಾಡೋಣವೆಂದು ನಿರ್ಧರಿಸಿದೆ. ಹಾಗೂ ನಮ್ಮ ಸೋದರತ್ತೆಗೆ ಕಾಗದ ಬರೆದುಹಾಕಿ, ಅದು ಆಕೆಗೆ ತಲಪುವಮೊದಲೇ ನಾನೇ ತಲಪಿದೆ. 'ಬಂದೆಯಾಪ್ಪಾ ಶಿವು. ಬಾ. ಈ ಹಳ್ಳಿಗೆ ನಿಮ್ಮಂತಹ ಪಟ್ಟಣದ ಹುಡುಗರು ಬರುವುದೇ ಅಪರೂಪ. ಮನೆಯಲ್ಲಿ ಎಲ್ಲರೂ ಆರೋಗ್ಯವೇ,' ಎಂದು ಆದರದಿಂದ ಬರಮಾಡಿಕೊಂಡಳು.

ಒಂದೆರಡು ದಿನಗಳಲ್ಲಿ ಹಳ್ಳಿಯನ್ನೆಲ್ಲಾ ಸುತ್ತಿ ಅಲ್ಲಿ ನೋಡಬೇಕಾದುದನ್ನೆಲ್ಲಾ ನೋಡಿದೆ. ನಂತರ ಏನುಮಾಡುವುದಕ್ಕೂ ತೋರದೆ ಮಧ್ಯಾಹ್ನ ಊಟವಾದಮೇಲೆ ಏನಾದರೂ ಹಾಸ್ಯದ ಲೇಖನ ಬರೆಯೋಣ ಎಂದು ಯೋಚಿಸಿ ಪೆನ್ಸಿಲ್ಲು ಕಾಗದ ಅಣಿಮಾಡಿಕೊಂಡು ಕೊಠಡಿಯಲ್ಲಿ ಚಾಪೆಯಮೇಲೆ ಹಾಸಿಗೆಯನ್ನೊರಗಿಕೊಂಡು ಕುಳಿತೆ. ಚಕ್ಕಲಮುಟ್ಟಿಗೆ ಹಾಕಿ ತೊಡೆಯಮೇಲೆ ಮಣೆ ಇಟ್ಟುಕೊಂಡು ಅದರಮೇಲೆ ಕಾಗದವನ್ನಿಟ್ಟು ಪೆನ್ಸಿಲ್ಲಿನ ತುದಿಯಿಂದ ತಲೆ ಕೆರೆದುಕೊಳ್ಳಲಾರಂಭಿಸಿದೆ. ಏನೊಂದೂ ಹಾಸ್ಯದ ಯೋಚನೆಯು ಹೊರಡಲಿಲ್ಲ. ಸೊಂಟಮಾತ್ರ ಸ್ವಲ್ಪ ನೋವಾಗಲಾರಂಭಿಸಿತು. ಕಾಲು ಜೋವುಹಿಡಿಯಿತು. ಇದು ಸುಖವಿಲ್ಲ. ಆರಾಮವಾಗಿ ಕೂತರೆ ಮನಸ್ಸು ಮುಂಜಾಗ್ರತೆಪಡೆಯುತ್ತದೆ ಎಂದು ಸುತ್ತಲೂ ಕುರ್ಚಿ ಇದೆಯೇ ಎಂದು ಹುಡುಕಿದೆ ಎಲ್ಲೂ ಕುರ್ಚಿಯಿರಲಿಲ್ಲ. ಕುರ್ಚಿಯೇಕೆ, ಈ ಸುತ್ತಿದ ಹಾಸಿಗೆಮೇಲೆ ಕುಳಿತರೆ ಆಯಿತು ಎಂದು ಹಾಗೆಯೇ ಮಾಡಿದೆ. ಕಾಲು ಮುಂದಕ್ಕೆ ಚಾಚಿದೆ. ಮಣೆ ಕಾಗದ ಪೆನ್ಸಿಲ್ಲು ಎಲ್ಲವೂ ತಮ್ಮ ತಮ್ಮ ಸ್ಥಾನಗಳನ್ನು ಪಡೆದುವು. ಆಗ ನನ್ನ ಕಣ್ಣಿಗೆ ಕಂಡಿದ್ದು ನನ್ನ ಕಾಲ ಬೆರಳುಗಳು. ದೊಡ್ಡ ಬೆರಳಿಗೂ ಎರಡನೆಯದಕ್ಕೂ ನಡುವೆ ಕೆಂಪಾಗಿತ್ತು. ನೋಡಿದಮೇಲೆ ಸ್ವಲ್ಪ ಉರಿಯುವುದಕ್ಕಾರಂಭಿಸಿತು. ಆಗ ಜ್ಞಾಪಕಬಂತು. ಚಪ್ಪಲಿ ಉಂಗುಷ್ಟದ ಮೊಳೆಯು ಮೇಲಕ್ಕೆದ್ದಿತ್ತು. ಅದನ್ನು ಸರಿಮಾಡಿಸಲೇಬೇಕು. ಇನ್ನೂ ಕೊಂಡುಕೊಂಡು ಮೂರು ತಿಂಗಳಾಗಿಲ್ಲ. ಆಗಲೇ ಹೀಗಾಯಿತೇ, ಯುದ್ಧ ಕಾಲ ಚಪ್ಪಲಿ ಬೆಲೆಯೂ ಏರಿತ್ತು. ಚಪ್ಪಲಿಯೂ ಒಳ್ಳೆಯದಲ್ಲ, ಏನನ್ಯಾಯ, ಅಲ್ಲಾ, ಯುದ್ಧ ಆದಾಕ್ಷಣ ಚಪ್ಪಲಿ ಏಕೆ ಬೆಲೆ ಏರಬೇಕು. ಚಪ್ಪಲಿಗಳಿಂದ ಯುದ್ಧ ಆಡುತ್ತಾರೆಯೇ, ಇವರುಗಳ ಆಟಾಟೋಪ ನೋಡಿದರೆ, ಚಪ್ಪಲಿಗಳಿಂದ ಹೊಡೆದು

ಯುದ್ಧ ಮಾಡೋದೇ ನ್ಯಾಯ, ಇವೆಲ್ಲಾ ಮನಸ್ಸಿಗೆ ಹೊಳೆಯಿತು ಅಷ್ಟೇ ಹೊರತು ಲೇಖನ ಸಾಗಲಿಲ್ಲ.

ಇದು ಸುಖವಿಲ್ಲ. ಟ್ರಂಕಿನಮೇಲೆ ಮಣೆ ಇಟ್ಟು ನೆಲದಮೇಲೆ ಕಾಲುನೀಡಿ ಕೂತುಕೊಂಡರೆ ಚೆನ್ನಾಗಿ ಬರೆಯಬಹುದು ಎನ್ನಿಸಿತು. ಸರಿ. ಐದು ನಿಮಿಷ ಗಳಲ್ಲಿ ಟ್ರಂಕನ್ನೇ ಮೇಜನ್ನಾಗಿ ಮಾಡಿದೆ. ಚಾಪೆಯಮೇಲೆ ಕಾಲುನೀಡಿ ಕುಳಿತೆ ಆವೇಳೆಗೆ ಟ್ರಂಕಿನ ಕೆಳಗೆ ಏನೋ ಓಡಾಡಿದಂತಾಯಿತು. "ಅಯ್ಯಪ್ಪೊ! ಚೇಳು" ಎಂದು ಛಂಗನೆ ಹಾರಿನಿಂತೆ. ಬೇಗಹೋಗಿ ಒನಕೆ ತಂದೆ. ನಮ್ಮ ಸೋದರತ್ತೆ ಯನ್ನೂ ಸಹಾಯಕ್ಕೆ ಕರೆದೆ. ಟ್ರಂಕನ್ನು ಒಂದುಕಡೆಗೆ ನೂಕಿದೆ. ಏನೂಇಲ್ಲ. ಎತ್ತಿದೆ ಏನೂಇಲ್ಲ ಸುಮ್ಮನೆ ಹೆದರಿದ್ದಿ ಏನೂಇಲ್ಲ ಎಂದು ಸೋದರತ್ತೆ ಮೂದಲಿ ಸಿದಳು ಪಟ್ಟಣದ ಹುಡುಗರು ನಿಮಗೆಲ್ಲಿ ಬಂತು ಧೈರ್ಯ ಎಂದು ಹೀಯಾಳಿ ಸಿದಳು. ಮನೆಯಲ್ಲಿ ಚೇಳು ಕಂಡರೆ ಪೋಲೀಸಿನವರಿಗೆ ಹೇಳಿ ಕಳುಹಿಸುವವರು ಎಂದು ಆಡಿಕೊಂಡು ನಕ್ಕಳು. ನಾನೂ ಪೆಚ್ಚಾದೆ. ಏನೋ ಓಡಾಡಿತು ಟ್ರಂಕಿನ ಕೆಳಗೆ ಒನಕೆ ತರುವುದರೊಳಗೇ ಅದೃಶ್ಯ ಮಾಯಾವೀ ಚಾಪೆಕೆಳಗೆ ಇರಬಹುದೇ, ಚಾಪೆ ಎತ್ತಿ ಝಾಡಿಸಿದೆ. ಧೂಳು ಮೋಡ ಕಟ್ಟಿತು. ಕೆಮ್ಮುತ್ತಾ, ಕಾರುತ್ತ ತಿರುಗಿ ಚಾಪೆ ಹಾಸಿದೆ ಹಾಸಿಗೆಯೆಲ್ಲಾ ಹುಡುಕಿದೆ. ಏನೂಇಲ್ಲ.

ಇದೆಲ್ಲಾ ಪ್ರಯೋಜನವಿಲ್ಲ ಸಾಯಂಕಾಲ ತಂಪಾಗಿರುತ್ತೆ ಕೆರೆಯ ಏರಿಯಮೇಲೆ ಹೋಗಿ ಆರಾಮವಾಗಿ ಕುಳಿತು ಬರೆದರೆ ಹಾಸ್ಯ ತಾನಾಗಿತಾನೇ ತುಳುಕಾಡುತ್ತೆ ಎಂದಂದುಕೊಂಡು ಆ ಸಾಯಂಕಾಲ ಕೆರೆಯ ಏರಿಯಮೇಲಕ್ಕೆ ಕಾಗದ ಪೆನ್ಸಿಲ್ಲು ಅಣಿಮಾಡಿಕೊಂಡು ಹೋದೆ. ಹಚ್ಚಹಸುರಿನ ಪೈರು. ತಿಳಿ ಬಗ್ಗಡದ ನೀರಿನ ಕೆರೆ, ದೂರದಲ್ಲಿ ಒಂದು ಗೋಸಾಯಿ ಮಂಟಪ. ಅಲ್ಲೊಂದು ಬಸವ ಶಿಥಿಲವಾದ ಮೆಟ್ಟಲುಗಳು. ಅಲ್ಲಲ್ಲೇ ದಡದಲ್ಲಿ ಎಮ್ಮೆಗಳು. ಒಮ್ಮಿಂ ದೊಮ್ಮೆ, ಎಮ್ಮೆಯ ಕರುಗಳು ತಾಯಿಯನ್ನು ಪ್ರೀತಿಯಿಂದ ಕರೆಯುವ ಕೂಗು. ನಾನು ಹೋದ ಕೂಡಲೆ ಮೆಟ್ಟಲುಗಳಿಂದ ಕೆರೆಗೆ ಕುಪ್ಪಳಿಸಿದುವು ನಾಲ್ಕಾರು ಕಪ್ಪೆಗಳು. ನನಗೆ ಆಶ್ಚರ್ಯ. ಅಲ್ಲಾ ನಾನು ಭಾರತೀಯ. ನನ್ನನ್ನು ಕಂಡರೆ ಯಾವನೊಬ್ಬನಿಗೂ ಸೊಕ್ಕು. ಕಡೆಗೆ ನನ್ನ ವರ್ಣದವನೇ ಆದ ಆಫ್ರಿಕಾದೇಶದ ವನೂ ನನ್ನ ಅಸಹಾಯತೆಯನ್ನು ಕಂಡು ಅಲ್ಲಗಳೆಯುತ್ತಾನೆ. ನನ್ನನ್ನು ಯಾರಾ ದರೂ, ಅದರಲ್ಲೂ ಬಿಳಿಯರು, ಮಾತನಾಡಿಸಿದರೆ ನನ್ನ ಐಶ್ವರ್ಯವನ್ನು ಸೂರೆ ಗೊಳ್ಳಲೋಸುಗವೇ ವಿನಹಾ ಬೇರೆ ಕಾರಣದಿಂದಲ್ಲ. ಹೀಗಿರುವ ನನ್ನನ್ನು ಕಂಡರೆ ಹೆದರುವ ಈ ಕಪ್ಪೆಗಳಿಗೆ ಏನೆಂದು ಹೆಸರಿಡೋಣ. ಜಪಾನಿನಲ್ಲಿ, ಚೀನಾದಲ್ಲೂ ಕೂಡ, ಕಪ್ಪೆಗಳನ್ನು ಕೊಂದು ತಿನ್ನುತ್ತಾರೆಂದು. ಆಗಬೇಕು ಹೀಗೆ ಹೆದರಿಸಾಯುವ ಕಪ್ಪೆಗಳಿಗೆ ಅದೇ ಶಾಸ್ತ್ರಿ, ಹೀಗೆಲ್ಲಾ ಮನಸ್ಸು ಓಡತೊಡಗಿತು.

ಆಗ ನಿರ್ಧರಿಸಿದೆ. ಪಟ್ಟಣಕ್ಕೆ ಹಿಂತಿರುಗಿದಮೇಲೆ ಮೇಜು ಕುರ್ಚಿ ಇಟ್ಟು ಕೊಂಡು ಬರೆಯುವುದೇ ಲೇಸು ಎಂದು. ಹಾಗೆ ಬರೆದಿದ್ದೇ ಈ ಲೇಖನ.

* * *

## ಕಾದಿರುವಳು ಶಬರೀ

( ಶ್ರೀಮಾ॰ ವಿ. ಸೀತಾರಾಮಯ್ಯನವರ ಕ್ಷಮೆಯನ್ನು ಬೇಡಿ )

# ಕಾದಿರುವಳು ಗೌರಿ

---

ಕಾದಿರುವಳು ಗೌರೀ
ಭೀಮು ಬರುವನೆಂದು
ತನ್ನ ಸಿನೀಮಾಕ್ಕೆ ಕರೆದೊಯ್ವನೆಂದು ||

ಮುಖವನ್ನು ಸೋಪಿನಲಿತೊಳೆದು
ಸರಸರನೆ ಜಡೆಯಹೆಣೆದು
ಜಾರ್ಜೆಟ್ಟು ಸೀರೆಯುಟ್ಟು
ಬಿರಿಪೂವ ಮುಡಿದುಕೊಂಡು || ೧ ||

ರಾಣಿಸ್ನೋವ ಹಚ್ಚಿಮುಖಕೆ
ಹೇರಪಿನ್ನ ಸಿಗಿಸಿತಲೆಗೆ
ಕನ್ನಡಕ ಹಾಕಿಕೊಂಡು
ಗೇಟಿನಲಿ ಕಾದುನಿಂದು || ೨ ||

ಸಿಟಿಬಸ್ಸು ಪುರ್‌ಪುರೆನಲು
ಕಿವಿಯೆತ್ತಿ ಆಲಿಸುವಳು
ಜಟಕಬರಲು ದಾರಿಯಲ್ಲಿ
ಕೂತಿರುವರೆಂದು ತಿಳಿದು || ೩ ||

ದೂರಕ್ಕೆ ನೋಳ್ಪನೆಂದು
ಮಹಡಿಯೇರಿ ದಿಟ್ಟಿಸುವಳು
ಮೂಗಿನಮೇಲೆ ಬೆರಳನಿಟ್ಟು
ಕತ್ತೆತ್ತಿ ನೋಡುತಿಹಳು || ೪ ||

ಬಂದರಾ ರಾಯರಾ ರಾಯರೆಂದು
ಬರುತಿಹರು ಇಹರು ಎಂದು
ಸಂಜೆಯೆಲ್ಲ ತವಕಿಸಿಹಳು
ಕಳೆದಿಹವು ರಾತ್ರಿಹಲವು || ೫ ||

ಗೌರಿವೊಲು ಹೆಣ್ಣು ದಿನವು
ಅನುದಿನವು ಬೇಡುತಿಹುದು
ಕರೆಕೊಂಡು ಹೋಗದಿರಲು
ಅಡಿಗೆಯನ್ನು ಕೆಡಿಸುತಿಹರು ॥ ೬ ॥

ಭರವಸೆಗಳಳಿಯುವಾಗಿ
ಮನವೆಲ್ಲಬಯಕೆಯಾಗಿ
ಸಂಜೆಯೆಲ್ಲ ಕಾದುಕೊರಗಿ
ಇರುಳೆಲ್ಲ ಜಗಳವಾಡಿ ॥ ೭ ॥

ಬಂದಾರೋ ಬಾರರೋ
ಪೋದಾರೋ ಪೋಗರೋ
ಎಂದೆಂದು ತಪಿಸಿ ಶಪಿಸಿ
ಶಂಕಾತುರಂಗಳೂರಿ ॥ ೮ ॥

ಬಾ ಭೀಮ ಬಾರಬಾರ
ಹೆಂಡತಿಯನೊಲಿಸುಬಾರ
ಕಂಗಾಣದವಳ ಪ್ರೇಮ
ಸಿನೀಮನೋಡುವಾಪ್ರೇಮ

—ಬಿ. ಯಸ್. ರಾ.



ಬಳೆಗಳ ಬೆಲೆಯು ವಿಪರೀತವಾಗಿ ಏರಿದೆಯಂತೆ.

—ಅಲ್ಲದೆ ಏನು, ಗಂಡಸರೂ ಬಳೆ ತೊಟ್ಟುಕೊಳ್ಳುವ ಹಾಗಾದರೆ.

✦ ✦ ✦

ಎಡಿಸನ್ ಅವರು ಗೋಡೆಯ ಮೇಲೆ ಕಲ್ಲಿದ್ದಲಿನಿಂದ ಲೆಕ್ಕ ಮಾಡುತ್ತಿದ್ದರಂತೆ.

—ನಮ್ಮ ಮಕ್ಕಳೂ ಹಾಗೆಯೇ—

✦ ✦ ✦

# ಮಮ್ಮಿ

ಮೊದಲು ತಾಯ ಮಡಿಲಿನಲ್ಲಿ
ತೊದಲು ಮಾತನಾಡುವಲ್ಲಿ
ಹೆಮ್ಮೆಯಿಂದ ತುಟಿಗೆ ಬಂದ
ಮಾತದಾವುದು ?

ಅಮ್ಮನಿಗೆ—ಮಮ್ಮಿ !
ಅಪ್ಪನಿಗೆ —ಪಪ್ಪಿ !

ಕನ್ನಡನುಡಿ ನನ್ನ ಕಣ್ಣು,
ನನ್ನ ತೋಟದಿನಿಯ ಹಣ್ಣು !
ಆದರದನು ನುಡಿಯಬಿಡರು,—
ನುಡಿಸಿದಾವುದು ?

ಅಮ್ಮನಿಗೆ—ಮಮ್ಮಿ,
ಅಪ್ಪನಿಗೆ —ಪಪ್ಪಿ !

ಕಡಲನಾಯ ಸಂತತಿಯರೆ
ನಮ್ಮ ಜೀವದುಸಿರು, ನೀರು,
ಎಂದುನಂಬಿ ಎನ್ನತಲೆಗೆ
ತುಂಬಿದ್ದಾವುದು ?

ಅಮ್ಮನಿಗೆ—ಮಮ್ಮಿ
ಅಪ್ಪನಿಗೆ —ಪಪ್ಪಿ !

ಹೀಗೆ ನನಗೆ ಲಜ್ಜೆ ಬರಿಸಿ
ತಂದೆ ತಾಯ್ಗೆ ಹಬ್ಬ ಎನಿಸಿ
ಸೀಮೆ ತೊದಲನೆನಗೆ ಕಲಿಸಿ
ಗಿಳಿಸಿದಾವುದು ?

ಅಮ್ಮನಿಗೆ—ಮಮ್ಮಿ,
ಅಪ್ಪನಿಗೆ —ಪಪ್ಪಿ !

—ಬೇಬಿ ಕೋಜಾ.

—o—

# ಉಚಿತ ಉಪದೇಶ

ನನಗೆ, ಇದಿಕ್ಕೇ ಈಗಿನಕಾಲದ ಹುಡುಗರಲ್ಲಿ ಗೌರವ ಸುತರಾಂ ಇಲ್ಲ ಅನ್ನೋದು. ನಿಮಗೇನು ಬಂತಯ್ಯಾ ಕೇಡು ? ಕರಣಿ ಕೆಲಸಕ್ಕಿಂತ ಕರಣಿಕನ ಕೆಲಸವೇ ಗೌರವ ಅನ್ನೋಕಾಲ ನಮ್ಮ ಕಾಲಕ್ಕೇ ಮುಗಿದುಹೋಯಿತು. ಆಗ ಅಂದ್ರೆ ಗುಮಾಸ್ತೆಯಾದರೂ ಗೌರವವಿತ್ತು ಜನಗಳಿಗೆಲ್ಲಾ ಭಯ ಭಕ್ತಿ ಇರೋದು. ಮೊದಲು ಮನೇಲಿ ಬಂದು ಕಾಣ್ತಿದ್ರು. ಮಾಮೂಲಿಗೆ ಹಿಂಗೈ ಹಿಡಿಯಬೇಕಾದ್ದೇ ಇರಲಿಲ್ಲ. ಈಗೇನು ನಾವಾಗಿಯೇ ಕೈತೋರಿಸಿದ್ರೂ ಅವಲಕ್ಷಣ ಅಂತಾರೆ. ಆಗಿನ ಕಾಲದ ಅಧಿಕಾರದ ದರ್ಪ ಈಗೆಲ್ಲಿ ಬಂತು ! ಆದ್ದರಿಂದ ನೀನು ಏನೋ ಅಲ್ಪಸ್ವಲ್ಪ ಗೌರವ ಉಳಿಸಿಕೊಂಡು ಬಾಳಬೇಕಾದರೆ ಸೆಕ್ರೆಟೇರಿಯಟ್‌ಗೆ ಅರ್ಜಿಗಳು ಗುಜರಾಯಿಸಬೇಕಾದ್ದಿಲ್ಲ ನೀವು ಹುಡುಗರು ಮುಂದೆ ನುಗ್ಗಬೇಕಯ್ಯಾ. ಹಳಬರ ಹಾಗೆ ನೀವೂ ನಿಂತ ಕಡೇನೇ ಕೂತರೆ ಹೇಗಯ್ಯಾ. ಆಚೆಮನೆ ಪುಟ್ಟು....ಹೂಂ ....ರಾಮರಾಯರ ಮಗ ಮೂರುಸಲ ಹೊಡದ ಎಸ್. ಎಸ್. ಎಲ್. ಸೀಲೇ ಹುಂಕೆ. ಕಡೇಗೆ ಒಂದು ದಿವಸ ರಾತ್ರಿ ಪರಾರಿ. ಒಂದು ತಿಂಗಳಾದಮೇಲೆ ಬೊಂಬಾಯಿಂದ ಕಾಗದ ಬಂತು....ಈಗನೋಡು ತಿಂಗಳಿಗೆ ನನ್ನ ಸಂಬಳಕ್ಕೆ ನಾಕರಷ್ಟು ಸಂಪಾದಿಸ್ತಾ ಇದಾನೆ ...ಯಾವುದೋ ಬೂಟ್‌ಪಾಲಿಷ್ ಮಾರ್‍ತಾನಂತೆ. ನಿಂದೋ ಸೈನ್ಸ್ ಡಿಗ್ರಿ, ನಿಮ್ಮಪ್ಪ ಇಷ್ಟೆಲ್ಲಾ ಕಷ್ಟಪಟ್ಟು ನೋಟು ಸುರಿದು ನಿನ್ನ ಬಿ. ಎಸ್‌ಸಿ. ಅನ್ನಿಸಿದ....ನೀನು ಕಲಿತಿರುವ ವೈಜ್ಞಾನಿಕ ಸಂಶೋಧನೆಗಳನ್ನು ಉಪಯೋಗಿಸಿ ಏನಾದರೂ ಮಾಡಯ್ಯಾ. ರಸಾಯನಶಾಸ್ತ್ರ ಓದಿದೀಯಾ. ನೆಟ್ಟಗೆ ಒಂದು ರಸಾಯನವನ್ನಾದರೂ ಮಾಡಿ ಮಾರಿದರೆ ನೋಟು ಬಂದು ಬೀಳುತ್ತೆ. ಈ ಯುದ್ಧ ನಿನ್ನ ಪುಣ್ಯದಿಂದ ಇನ್ನೂ ನಾಕು ವರ್ಷ ನಡೆದರೆ ನೀನೂ ಲಕ್ಷಾಧೀಶನಾಗಬಹುದು. ಮಸಿ ಬಳಿದು ಸಹಸ್ರಾಧೀಶರಾಗಿದಾರೆ ಬುದ್ಧಿವಂತರು, ಬಟ್ಟೆ ಒಗೆದು ಲಕ್ಷಾಧೀಶರಾಗಿದಾರೆ. ನಾನು ಕಂಡಹಾಗೆ ಸೋಮು ಮೂರು ವರ್ಷದ ಹಿಂದೆ ಅರಳಿ ಕಟ್ಟೆಕೆಳಗೆ ಗೋಲಿ ಆಡ್ತಿದ್ದ. ಆಮೇಲೆ ಏನೋ ಅಳಲೆಕಾಯಿಂದ ಶಾಯಿ ಮಾಡಲಿಕ್ಕೆ ಹತ್ತಿದ. ಈಗ ಓಹೋಹೋ ತಿಂಗಳಿಗೆ ಆರುನೂರು ಏಳುನೂರು ಸಂಪಾದನೆ, ಮೂರುಮನೆ ಕೊಂಡುಕೊಂಡಿದಾನೆ ಬಸವನಗುಡೀಲಿ. ಭೀಮು—ಎರಡು ವರ್ಷದ ಹಿಂದೆ ತಾನೇ ಬಟ್ಟೆ ಒಗೆದು ಮಡಿಮಾಡಿ ಕೊಡ್ತಿದ್ದ. ಈಗ ಅವನ ಕೈಕೆಳಗೆ ಇಪ್ಪತ್ತು ಅಗಸರು, ನೂರು ಕತ್ತೆಗಳೂ ಇವೆ—ಸದ್ಯದಲ್ಲೇ ಒಂದು ಲಾರಿ ತೆಗೆದುಕೊಳ್ಳುತ್ತಾನಂತೆ. ಅಂಥಾದ್ದರಲ್ಲಿ ನಿನಗೇನಯ್ಯಾ ! ಅದರಲ್ಲೂ ಬಿ. ಎಸ್. ಸಿ ಪಾಸುಮಾಡಿ ! ಯಾವುದಾದರೂ ಒಂದು ಸಣ್ಣ ಕೈಗಾರಿಕೆ ಹೂಂ ಕೈ—ಗಾರಿಕೆ ಆಲೋಚನೆ ಮಾಡು ಒಂದು ಪ್ಲಾನು ತಯಾರುಮಾಡು ; ನಾಕುಜನದ ಮುಂದೆ ಹಿಡಿ. ಶುರುಮಾಡು. ಕ್ಷೌರಮಾಡಿಕೊಳ್ಳೋ ಬ್ಲೇಡಿಗೆ.

ಬ್ಲೇಡಿಗೂ ನಾವು ಬಿಳಿಯುವರ ಕಾಲು ಹಿಡಿಯಬೇಕಾಗಿ ಬಂದಿದೆ. ಒಂದು ಗುಂಡು ಸೂಜಿ ಮಾಡುವುದಕ್ಕಾಗುವುದಿಲ್ಲ ನಮ್ಮ ಕೈಲಿ. ಬೂಟ್ ಪಾಲಿಷು, ಪೆನ್ಸಿಲ್ ಗಳು, ಟೈಪ್‌ರೈಟರುಗಳು, ಗಡಿಯಾರಗಳು, ಬೂಟ್‌ಲೇಸು—ಬಲ್ಬುಗಳು ಯಾವು ದಾದರೂ ಒಂದು ಸಣ್ಣ ಕೈಗಾರಿಕೆ....ಯೋಚನೆಮಾಡು, ಅಂತೂ ಈ ಸಣ್ಣಪುಟ್ಟ ಕೆಲಸಗಳಿಗೆ ಮಾತ್ರ ಅರ್ಜಿಹಾಕಬೇಡ....

* * *

ಏನು ರಾಮು ! ಬಹಳಸಂತೋಷ....ಫಸ್ಟ್‌ಕ್ಲಾಸಿನಲ್ಲೇ ಪಾಸುಮಾಡಿದೆ ಯಂತೆ. ಹಾಗಿರಬೇಕು. ನಾರಾಯಣರಾಯರ ಮಕ್ಕಳೆಲ್ಲಾ ಬುದ್ಧಿವಂತರಾಗ್ತಾ ಇದಾರಲ್ಲಾ ಅಂತ. ಸರಿಯಪ್ಪ. ಮುಂದೆ ಏನುಮಾಡಬೇಕು ಅಂತ ಇದೀಯ ? ಎಲ್ಲಾದರೂ ಒಂದು ಒಳ್ಳೆ ಕೆಲಸ ಸಿಕ್ಕಿ ಸುಖವಾಗಿರಬೇಕು. ಈಗಿನ ಕಾಲದ ಲ್ಲೇನು ಕಾಸಿಗೆ ಬೆಲೆಯಿಲ್ಲ. ಈಗಿನ ಎಪ್ಪತ್ತೈದು ಅಂದರೆ ಆಗಿನ ಇಪ್ಪತ್ತೈದು. ಬದುಕೇ ಕಷ್ಟವಾಗಿದೆ. ಆದ್ದರಿಂದ ಸಣ್ಣಪುಟ್ಟ ಚಾಕ್ರಿಗಳಿಗೆ ಕೈ ಒಡ್ಡಬಾರದು ನೀನು. ನಿನ್ನ ವಯಸ್ಸೆಷ್ಟು ರಾಮು ? ಇಲ್ಲ ಸುಮ್ನೆ ಕೇಳಿದೆ ಅಷ್ಟೆ....ಜಾತಕಕ್ಕಲ್ಲ ....ಇಪ್ಪತ್ತೆರಡೆ ? ಹಾಗಾದರೆ ಸಿವಿಲ್ ಸರ್ವಿಸ್ ಪರೀಕ್ಷೆಗೆ ಕೂತ್ಕೋ....ಯಾಕೆ ನಗ್ತೀಯಾ ಬರೋಲ್ಲಾ ಅಂತಲೇ. ಚೆನ್ನಾಯಿತು— ಕಂಡೋರು ಯಾರು ಬ್ರಹ್ಮ ಯಾರ ಹಣೇಲಿ ಏನು ಬರೆದಿದಾನೋ ! ಪ್ರೊಫೆಸರ್ ಯಾವುದಾದರೂ ಪ್ರಯತ್ನಪಡು. ಇಲ್ಲಾ ಮೆಡಿಕಲ್ ಕಾಲೇಜು ಸೇರ್ತೀಯೋನು ? ಡಾಕ್ಟರಾಗ ಬಹುದು. ಇನ್ನೊಂದು ಆರೇಳುವರ್ಷ ಕಷ್ಟಪಡಬೇಕು. ಆಮೇಲೆ ಮಿಲಿಟರಿ ಸೇರಿದರೆ ಮುನ್ನೂರು ಬರುತ್ತೆ ಆದರೇನು ಮಹಾ. ಸದ್ಯದಲ್ಲಿ ಏನುಮಾಡ್ತಿ ದೀಯಾ ? ಏನೂ ಇಲ್ಲವೇ ? ಅಯ್ಯೋ ಪಾಪ. ನಮ್ಮ ಸೀನೂಮಲ್ ಅಂಗಡಿ ಇದೆನೋಡು. ಅವನಿಗೆ ಇಂಗ್ಲಿಷ್ ಬರೋ ಗುಮಾಸ್ತೆ ಬೇಕು ಅಂತ ಹೇಳಿದ್ದ. ತಿಂಗಳಿಗೆ ಒಂದು ಮೂವತ್ತು ಕೊಟ್ಟಾನು ನಾನು ಇನ್ನು ಯಾರಿಗೂ ಹೇಳಿಲ್ಲ. ನೀನು ಒಪ್ಪುವುದಾದರೆ ನೋಡು ನಂಬಿಕಸ್ಥ ಅಂತಹೇಳಿ ಮಾಡಿಸ್ತೀನಿ. ಶಾಖಾಯ ಲವಣಾಯ ಅಂತ ಅಷ್ಟೆ ಸುಮ್ನೆ ಕೂತಿರೋ ಬದಲು....

* * *

ನೋಡು ರಾಮು ! ಏನುಮಾಡಲಿ ಅಂತ ನನ್ನ ಕೇಳ್ತೀಯ. ನಾನು ಹೇಳೋದು ನಿನಗೆ ರುಚಿಸದೆ ಇರಬಹುದು ಆದರೂ ಹೇಳಿಬಿಡ್ತೇನೆ ಕೇಳು. ನಾನು ಇಪ್ಪತ್ತು ವರ್ಷದಿಂದ ಹೈಕಳ ಮಧ್ಯೆ ಬೆಳೆದವನು ಸ್ಕೂಲುಮೇಷ್ಟ್ರು.... ನಾನೂ ಬಾಕಿಯುವರ ಜೀವನ ನೋಡಿದೇನೆ. ಆದರೆ ಮೇಷ್ಟ್ರು ಕೆಲಸದಷ್ಟು ಒಳ್ಳೆ ಕೆಲಸ ಇನ್ನು ಯಾವುದೂ ಇಲ್ಲ. ಸದಾ ಹುಡುಗರ ಸಹವಾಸ. ನನಗೆ ಇಷ್ಟು ವಯಸ್ಸಾದದ್ದೂ ಗೊತ್ತಾಗಲಿಲ್ಲ. ನಗನಗ್ತಾ ಪಾಠ ಹೇಳ್ತಾಹೋದರೆ, ದಿನಗಳು ಕಳೆಯುವುದೇ ಗೊತ್ತಾಗುವುದಿಲ್ಲ. ವರ್ಷಕ್ಕೆ ಎರಡು ತಿಂಗಳು ರಜ ;

ಏನೋ ಒಂದಿಷ್ಟು ಸಂಬಳ, ಸಾಲದ್ದಕ್ಕೆ ಸಾಲ. ಬದುಕಿದ್ದರೆ ವೇತನ್ನೂ ಬರುತ್ತೆ. ಆದರೆ ಧನಪಿಶಾಚಿ ಹಿಡಿದಿತ್ತೋ ಇಲ್ಲಿ ಬಾಳುವುದಕ್ಕೆ ಸಾಧ್ಯವಿಲ್ಲ. ಏನೋ ಹುಟ್ಟಿಸಿದ ದೇವರು ನಮ್ಮ ಪಾಲಿಗೆ ಕೊಟ್ಟಿದ್ದು ಇಷ್ಟೇ ಹುಲ್ಲು ಅಂತ ಮೇದರೆ ಸುಖವಾಗಿ ಮೆಲುಕು ಹಾಕ್ತಾ ಇರಬಹುದು....

\+ \+ \+

ನಿಜ ರಾಮು ನಿಜ ಹತ್ತುಜನ ಕೇಳಿದರೆ ಹತ್ತುದಾರಿ ಹೇಳ್ತಾರೆ—ಎಲ್ಲ ಕೂಳಿನದಾರಿ. ಈ ಹೊಟ್ಟೆ ತುಂಬಿಸುವುದಕ್ಕೆ ಏನುಮಾಡುವುದು ಅಂತ ಪ್ರತಿಯೊಬ್ಬರ ಯೋಚನೇನು. ಆದರೆ ನೀನು ಎಲ್ಲರಹಾಗೆ ಪರಿದಾಡುವುದು ಸರಿಯಲ್ಲ. ನಿನ್ನ ಬಾಳನ್ನು, ಎಲ್ಲೋ ಯಾವುದೋ ಆಫೀಸಿನಲ್ಲೋ ಯಾರಿಗಾಗಿಯೋ ತೇದರೆ ಏನುಬಂತು ; ಬಾಡಿಗೆ ಎತ್ತಿಗೂ ನಿನಗೂ ಏನುವ್ಯತ್ಯಾಸ ? ಒಬ್ಬ ನಲವತ್ತು ಕೊಡಬಹುದು ಇನ್ನೊಬ್ಬ ನೂರು ಅನ್ನಬಹುದು. ಆದರೂ ರಾಮು, ನಮ್ಮ ಮನಸ್ಸಿಗೆ ಸಂತೋಷವುಂಟಾಗುವ ಕೆಲಸ ಯಾವುದಾದರೂ ಮಾಡಬೇಕು. ಯಾವುದಾದರೂ ಒಂದು ಫ್ಯಾಕ್ಟರಿಗೆ ಸೇರೋಣ ಅಂತೀಯ? ಸರಿ ಏರ್‌ಕ್ರಾಫ್ಟ್ಗೇ ಸೇರಿಬಿಡ್ತೀಯಾ. ಸಂತೇಲಿ ನೀನೂ ಒಬ್ಬ—ಸಮುದ್ರದಲ್ಲಿ ಒಂದು ಬಿಂದು. ಆದರೆ ರಾಮು, ಈಗ ನಮಗೆ ಇದು ಅಷ್ಟು ತೋರದಿದ್ದರೆ ಸಾಯುವ ಮುನ್ನ ಹಾಗೆ ನಮ್ಮ ಜೀವನ ಸಿಂಹಾವಲೋಕಿಸಿದರೆ, ಬರಿಯ ಹೀನಬಾಳು ನಮ್ಮ ಕಣ್ಣುಮುಂದೆ ಬಂದು ನಿಲ್ಲುತ್ತೆ. ಆದ್ದರಿಂದ ಯಾವುದಾದರೂ ಸೇವೆಮಾಡಬೇಕು. ರಾಮು, ನಿಮ್ಮ ತಂದೆಗೆ ಸ್ವಲ್ಪ ಜಮೀನು ಇದೆ ಅಂತೀಯ ಬಿ. ಎಸ್‌ಸಿ ಅಂತ ಬಿಂಕಪಡಬೇಡ....ಹಳ್ಳಿಯೇ ವಾಸಿ, ಹೋಗಿ ಸುಖವಾಗಿ ಆರಂಭಮಾಡು. ಹತ್ತಿರದ ಹಳ್ಳಿಯ ಜನರನ್ನು ಉದ್ಧಾರ ಮಾಡು. ಅವರಿಗೆ ಅಕ್ಷರಕಲಿಸು; ಸಣ್ಣಸಣ್ಣಗ್ರಾಮ ಕೈಗಾರಿಕೆಗಳನ್ನು ಅವರಿಗೆ ಹೇಳಿಕೊಟ್ಟು ಅವರ ವಿರಾಮವನ್ನು ಸದುಪಯೋಗಪಡಿಸು ; ಹೊಟ್ಟೆಗೆ ನಾಕುಕಾಸು ಜಾಸ್ತಿ ಬರುತ್ತೆ. ಮದ್ಯದೇವಿಯಿಂದ ಅವರನ್ನು ಬಿಡಿಸು ರಾಟೆಗಳನ್ನು ಇಡು. ಬೇಕಾದರೆ ನಮ್ಮಮನೆ ಅಟ್ಟದಮೇಲೆ ಬಿದ್ದಿವೆ ನಾಕೋ ಐದೋ. ನೂಲು ತೆಗೆದು ಬಟ್ಟೆ ನೇಯ್ದು ಮಾರುವುದಕ್ಕೆ ಏರ್ಪಾಟುಮಾಡು. ಬಡಬೋರೇಗೌಡ ನಿನಗೆ ಹಣ ಕೊಟ್ಟು ಓದಿಸುವುದಕ್ಕೆ ಸ್ವಲ್ಪವಾದರೂ ಅವನಿಗೆ ಉಪಕಾರಮಾಡು....ಅಂಥ ಜೀವನ ತುಂಬು ಜೀವನ—ಮಿಕ್ಕಿದ್ದೆಲ್ಲಾ ಬರಿಯ ಬೂಟಾಟಿಕೆ—

—ಮೂರ್ತಿ.

——o——

# ನವೀನ ಗಾದೆಗಳು

( ಪರೀಕ್ಷೆ ಫಲಿತಾಂಶ )

---

## ( ಪಾಸ್ )

ಎದೆ ಸೀಳಿದಾಗ ಎರಡಕ್ಷರ ಬಂತು
ಬಿರುದು ಬರದೆ ಇದ್ದರೂ, ಬಾವಲಿಹಾಗೆ ನೇತಾಡುವುದು ತಪ್ಪಿತು
ವಾರದ ಹುಡುಗನಿಗೆ ವರದಕ್ಷಿಣೆ ಯೋಗ
ಗುರುವಿಗೆ ಬೇಕಾದ್ದು ಉರುಮಂತ್ರ
ಕ್ಲಾಸೋ ಗ್ಯಾಸೋ, ಪಾಸಾದ್ದೇ ಲಾಭ
ಹೋಗಿ ಬಾರೋ, ಬಿ. ಎ, ಅಂದರೆ, ಬಿ. ಟಿ. ಯೊಳಕ್ಕೆ ನುಗ್ಗಿದ.
ಓನಾಮ ಬರದೆ ಇದ್ದವ ಮೂರುನಾಮ ತಪ್ಪಿಸಿಕೊಂಡ
ಇದುವರೆಗೂ ಕಾಲಕ್ಷೇಪ; ಮುಂದೆಯೂ ಕಾಲಕ್ಷೇಪ
ಸಾವಿರಪುಸ್ತಕ ಓದಿದ್ದಕ್ಕೆ ಎರಡಕ್ಷರ ಉಳಿದುಕೊಂಡಿತು
ಸುಮ್ಮನೆ ಸುತ್ತುವುದಕ್ಕಿಂತ ಎಂ. ಎ. ಅಂತ ಸುತ್ತು
ಅಮ್ಮ ಹೆತ್ತ, ಹತ್ತರಪೈಕಿ ಒಂದೇ ಒಂದು ಎಂ. ಎ., !
ಮಿಕ್ಕಿದ್ದೆಲ್ಲ —— !

## ( ಫೆಯಿಲು )

ಒಬ್ಬಮಗ ಐಲು; ಇನ್ನೊಬ್ಬ ಫೆಯಿಲು
ಆಕೆ ಅರಳಿಮರ ಸುತ್ತಿದಳು; ಆತನಿಗೆ ಸೊನ್ನೆ ಸುತ್ತಿದರು.
ಇರುವುದೊಂದು ಬುರುಡೆ! ಅದರೊಳಗೆನೂರೆಂಟು ಬುರುಡೆ!
ಮುಟ್ಟಿದ್ದಕ್ಕೆ ಮೂರುಸಾರಿ! ಕಟ್ಟಿದ್ದಕ್ಕೆ ಮೂರು ಭೇಸ್ತು
ಆರುತಿಂಗಳು ಕಾಯೋದು ಬಿಟ್ಟು ವಾರುದ್ದನೇಣು ಕೇಳಿದನಂತೆ
ಬೆಳಗಾದಾಗ ತಿಳಿಯಿತು ಅಳಿಯನ ಬರಡು
ಸಾಣೆ ಹಿಡಿಯುವುದಕ್ಕೆ ಶಾಲೆಯಲ್ಲೊಬ್ಬರು; ಮನೆಯಲ್ಲೊಬ್ಬರು;
ಜಾಣನತಲೆ ನುಣ್ಣಗಾಯಿತು
ಮಗನ ಬಿ. ಎ. ತಣ್ಣಗಾದರೆ,
ಮನೆಗೆಬಂದ ಹೆಣ್ಣಿನ ತಪ್ಪೆ !

---



# ಚಕ್ರದೃಷ್ಟಿ

ಚಕ್ರದೃಷ್ಟಿ—(ವ್ಯಕ್ತಿಪರಿಚಯ):—ಬರೆದವರು: ನಾ. ಕಸ್ತೂರಿ. ಕಿರೀಟಾಕಾರದ ಅಷ್ಟಪುಟ vii + ೧೫೬. (ಪ್ರಿನ್ಸಿಪಾಲ್ ಗೋಕಾಕರ ಮುನ್ನುಡಿಯೊಡನೆ) ಬೆಲೆ ೧-೮-೦. ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ.

ಇದು ಮಕ್ಕಾಳೆ ಸಾಹೇಬರ ವಿದ್ಯಾ ಪ್ರಚಾರದ ಪುಣ್ಯಫಲವಾದ ಗುಮಾಸ್ತೆಯನ್ನು ಎತ್ತರದ ಪೀಠದ ಮೇಲಿರಿಸಿ ಕನಿಕರದ ದೃಷ್ಟಿಯಿಂದ ವಿವರಿಸಿರುವ ಗ್ರಂಥ! “ಇದೊಂದು ಹೊಸ ಮಾದರಿಯ ಕೃತಿಯಾಗಿದೆ” ಎಂದು ಗೋಕಾಕರೇ ಹೇಳಿದಾರೆ ಪ್ರಕಾಶಕರಿಗೆ ತಾವು ಕೊಟ್ಟ ಮಾತನ್ನು ಉಳಿಸುವುದಕ್ಕಾಗಿ ಹೊಸದಾಗಿ ಹೊಸೆದದ್ದು, ಎಂದು ಕಸ್ತೂರಿಯವರೂ ಒಪ್ಪಿಕೊಂಡಿದಾರೆ. ಈ ಗ್ರಂಥ ಮದ್ರಾಸ್ ಮೂಕ್ಕುಪುಡಿ ಅಲ್ಲ; ಮೈಸೂರು ಮಡ್ಡಿ ನಶ್ಯ! ನಿಧಾನವಾಗಿ ತೀಡಿ, ತಿಕ್ಕಿ ಆರಿಸಿ ಏರಿಸಿ ಅನುಭವಿಸಬೇಕಾದದ್ದು!

ಕಿಡಿಬಂಡೆ ಗುಂಡಪ್ಪ, ಬಿ ಎ., ಎಂಬ ವ್ಯಕ್ತಿಯ ಪರಿಚಯಕ್ಕಾಗಿ ಈ ಗ್ರಂಥ ಮೀಸಲು ಆತನ ಜೀವನದ ದಾರಿ ಮತ್ತು ಉಪಜೀವನದ ಪಾರಾಮಾರಿಗಳನ್ನು ತಾಯಿಯೂ, ಹೆಂಡತಿಯೂ, ಪಕ್ಕದ ಮನೆ ಎದುರು ಮನೆಯವರೂ, ಸಹೋದ್ಯೋಗಿಯೂ, ಸಾಹೇಬರೂ ಜವಾನನೂ, ಇಬ್ಬರಿಷ್ಟರೂ, ಒಬ್ಬ ನೆಂಟನೂ, ಸಂನ್ಯಾಸಿ ಗುರುಗಳೊಬ್ಬರೂ, ಏಕಾದಶ ಕೋಣಗಳಿಂದ ವಿವೇಚಿಸಿ ವಿವರಿಸುವರು.

ಗುಂಡಪ್ಪ, ಪಂಡಿತ ಪುತ್ರನಾಗಿ ಅವತಾರವೆತ್ತಿ, ಬೆಂಗಳೂರಿನಲ್ಲಿ ವಾರಾನ್ವೇಷಣದಿಂದ ಓದು ಮುಗಿಸಿ, ಎಂ. ಎ. ಎನಿಸದೆ ಕಿಡಿಬಂಡೆಗೆ ಹಿಂತಿರುಗಿ, ವಿಧುರಾಶ್ರಮದಲ್ಲಿ ಅಮಿಲ್ದಾರರ ಮಗಳೊಬ್ಬಳ ಕೈಹಿಡಿದು, ಹೆಡ್ ಗುಮಾಸ್ತೆಯಾಗಿ ಬೈಗಳು ತಿಂದು. ಕಿರುಕುಳದ ಕಲಿಗಳ ನಡುವೆ ದುಡಿದು ಬೇಸತ್ತು, ತನ್ನ ಆತ್ಮ ಸುಖಕ್ಕಾಗಿ ವಾತಾತ್ಮಜ ಪೂಜೆಯಲ್ಲಿ ನಿರತನಾಗಿ, ಅಭಿನವ ಆಂಜನೇಯನ ಬಾಲ ಹಿಡಿದು, ವಾತವೇ ಮುಖ್ಯವೆಂಬ ಸಿದ್ಧಾಂತಕ್ಕೆ ಬರುವನು. ಕಡೆಗೆ ತನ್ನ ಹೆಂಡತಿಯ ಶುಶ್ರೂಷೆಯಿಂದ ಅವನಿಗೆಲ್ಲವೂ ವಾಸಿಯಾಗುವುದು..... ಅಂತು, ಬಡಬಾಳಾಗ್ನಿಯಿಂದ ಬೆಂದ ಈ ಭಂಡಬದುಕನ್ನು ಹನ್ನೊಂದು ಜನರು ಅವರವರ ಚಿತ್ರವೃತ್ತಿ ಖಂಡದಿಂದ ವಿವರಿಸಿ ಒಟ್ಟು ಚಕ್ರದೃಷ್ಟಿಯನ್ನು ಸೃಷ್ಟಿ ಮಾಡುತ್ತಾರೆ.

"ಪುಸ್ತಕದಲ್ಲಿ ಅಲ್ಲಲ್ಲಿ ಪ್ರಾಸ್ತಾವಿಕವಾಗಿ ಕೆಲವು ಸಮಸ್ಯೆಗಳನ್ನೂ ಸಂಪ್ರದಾಯಗಳನ್ನೂ, ಹಲವರ ಬಾಯಿಂದ ಟೀಕಿಸಿದ್ದೇನೆ" ಎಂದು ಕಸ್ತೂರಿಯವರು ಹೇಳಿದ್ದಾರೆ. ಗೋಕಾಕರೂ ಕೂಡ, "ಹಾಸ್ಯದಲ್ಲಿ ಅವಿರಳವಾಗಿ ಬೆರೆತ ಈ ಜೀವನ ವಿಮರ್ಶೆ ಹಾಗು ಚಮತ್ಕೃತಿಯ ರಮ್ಯತೆಯೇ ಕಸ್ತೂರಿಯವರ ಪ್ರತಿಭೆಯ ಉತ್ತಮ ನಿದರ್ಶನ" ಎಂದಿದ್ದಾರೆ. ಲಾಡುವೊಳಗಿನ ಗೋಡಂಬಿ ದ್ರಾಕ್ಷಿಗಳಂತೆ ಅವು ಗ್ರಂಥದ ರುಚಿಗೆ ಪುಷ್ಟಿದಾಯಕವಾಗಿವೆ.

ಚಾಕರಿದಾರರು ಹೇಗೆ ನಗಬೇಕು, ಜವಾನರಿಂದ ಸಾಹೇಬರುಗಳ ಮಾನ ಹೋಗುವ ಬಗೆ, ಅತ್ತೆ ಸೊಸೆಯರ ಸಮರ ತಂತ್ರಗಳು, ದೇವಸ್ಥಾನ ಆಸ್ಪತ್ರೆಯಾಗಬಲ್ಲುದೇ, ಸುವರ್ಣಭಸ್ಮ ಮಾಡುವವರೆಲ್ಲ ಕಳ್ಳರೇ, ಬಸ್ಸು ಪ್ರಯಾಣಿಕರು ಪಿಸುಗುಟ್ಟಕೂಡದೇ, ಬಸವನಗುಡಿಯವರೆಲ್ಲ ಪುಣ್ಯಕೋಟಿಗಳೇ, ವರಾಹ ಸ್ವಾಮಿ ಎಂಬ ಹೆಸರಿದ್ದವರೆಲ್ಲ ಭೂಸಂಶೋಧನೆ ನಡೆಸಬೇಕೆ, ಗೃಹಸ್ಥಾಶ್ರಮಕ್ಕಿಂತ ಸಂನ್ಯಾಸ ಸ್ವೀಕಾರಕ್ಕೆ ಉತ್ತಮ ಉತ್ತೇಜನವುಂಟೆ, ಬಲವಂತಕ್ಕೆ ಹಾಡಿದರೆ ಅದು ತಲೆತಲಾಂತರಕ್ಕೂ ಅಂಟಿಕೊಂಡು ಬರುತ್ತದೆಯೇ, ಮಾಸ್ತಿಕಲ್ಲಿನ ಮೇಲೆ ಕಾಮನ ಬಿಲ್ಲಿನ ಪ್ರಯೋಗವೇ, ಲಂಚ ಸ್ವೀಕಾರಕ್ಕೂ ಪೂರ್ವ ಕರ್ಮಕ್ಕೂ ಸಂಬಂಧವುಂಟೆ, ಎಮ್ಮೆಸ್ಸಿಗೆ ಹೊಸ ದೃಷ್ಟಿ ಇರಲೇಬೇಕೆ, ಹುಲಿಯ ಹಾಲು ಮೈಗೊಳ್ಳಿಯದೇ, ಹೆಣ್ಣು ಮಕ್ಕಳು ಜಾಹಿರಾತುಗಳನ್ನು ಓದಬಹುದೇ, ಸಾಹೇಬರ ಸುತ್ತಳತೆಗೂ ಜವಾನರ ಸಂತೋಷಕ್ಕೂ ಸಂಬಂಧವಿಲ್ಲವೆ, ಇಂತಹ ನೂರಾರು ಸಮಸ್ಯೆಗಳನ್ನು ಕಸ್ತೂರಿಯವರು ಇಲ್ಲಿ ಬಿಡಿಸಿರುವರು ಇಂಥ ಚರ್ಚೆಗಳಲ್ಲಿ "ವಿಡಂಬನೆಯೂ ವೈಚಿತ್ರ್ಯವೂ ಸರಿಯಾಗಿ ಬೆರೆತಿವೆ" ಎಂದು ಗೋಕಾಕರು ಹೇಳಿರುವರಾದರೂ ಕೆಲವುಕಡೆ ವಿಡಂಬನದ ಗೋಡಂಬಿ ಹೆಚ್ಚಾಗಿದೆ ಎಂದೂ, ವೈಚಿತ್ರ್ಯದ ದ್ರಾಕ್ಷಿ ಹೆಚ್ಚಾಗಿದೆ ಎಂದೂ ಹೇಳದೆ ವಿಧಿಯಿಲ್ಲ. ಅಲ್ಲಲ್ಲಿ ಉಷ್ಣ ಪ್ರಧಾನವಾದ ಕಸ್ತೂರಿಯೇ ತುಂಬಿಹೋಗಿದೆ.

ಮತ್ತೊಂದು ಮಾತು. “ಗಡಿಬಿಡಿಯಲ್ಲೇ ಬಿರುಬಿರನೆ ಚಕ್ರದೃಷ್ಟಿಯನ್ನು ಬೀರಿ ಮುಗಿಸಿದೆ” ಎಂದು ಕಸ್ತೂರಿಯವರು ಹೇಳಿರುವರು. ಹೀಗೆ ಬಿರುಬಿರನೆ ಬೀರಿದಾಗ ಅಲ್ಲಲ್ಲಿ ಬಿರುಕುಗಳು ಉಳಿದುಹೋಗಿವೆ. ಶೈಲಿಯೂ ಕೊಂಚ ಗಡುಸಾಗಿದೆ; ಕಥೆಯ ನಡಿಗೆ ಕೊಂಚ ಬಿಗಿಯಾಗಿದೆ. ಮಾಮೂಲಿನಂತೆ ಈ ಗ್ರಂಥದಲ್ಲೂ ಅನೇಕ ಹೊಸ ಹಾಸ್ಯ ಶಬ್ದಕುಸುಮಗಳು ಅರಳಿ ಗಮಗಮಿಸುತ್ತಿವೆ. ಜ್ವರದೃತು ವಾಮೋರ್ಗೀಡ, ಹಾರೋಪ್ಲೇನು, ಇಂಗ್ಲೀಕ, ಕೋಪ ಮಂಡೂಕ, ಮಂದಹಾಸನ ಇತ್ಯಾದಿ ಅಲ್ಲಲ್ಲಿ ಹುಡುಕದೆಯೆ ಕಣ್ಣಿಗೆ ಬೀಳುತ್ತವೆ.

“ಗುಂಡಾಯಣ” ಎಂದು ಈ ಗ್ರಂಥವನ್ನು ಗ್ರಂಥಕರ್ತರೇ ಕರೆದಿದಾರೆ. ಅದರೊಳಗಿನ ಗುಮಾಸ್ತೆ ಗುಂಡಪ್ಪನ ಕಥಾವಾಹಿನಿ,

ಅತ್ತಲತ್ತ ಸುಳಿದು ಸುತ್ತಿ, ಇತ್ತಲಿತ್ತ ಬಳುಕಿ ಬಾಗಿ

ಅಲ್ಲಿ ಥಳುಕುತಿಲ್ಲಿ ಮಿನುಗಿ, ಅಲ್ಲಿ ಬಳಸುತಿಲ್ಲಿ ಕೊನರಿ

ನಗೆಯ ಸೇಸೆಗಳನು ಸೂಸಿ, ಹೊಗೆಯ ಚವರಗಳನೆ ಬೀಸಿ,........

ನೂರೈವತ್ತಾರು ಪುಟಗಳವರೆಗೆ ಹರಿದು, “ಶ್ರೀರಾಮರಕ್ಷೆ” ಎಂಬ ಮಂಗಳ ವಾಕ್ಯದಿಂದ ಮುಗಿಯುತ್ತದೆ ......ಇದನ್ನು ಕೊಂಡುಕೊಂಡವನು ಗಟ್ಟಿಗ; ಜೊಟ್ಟವನು ಕೆಟ್ಟ.

—ಕನ್ನಡಂ.

---

“ರಾಜಕೀಯದಲ್ಲಿ ಸಾಹಿತ್ಯ” (ಭಾಷಣದ ಪ್ರಕಟಣೆ)

—ರಾಜಕೀಯದಲ್ಲಿ ಸಾಯಿ ಸಿತ್ಯ ಅಲ್ಲವೇ?

◆ ◆ ◆

ಜೀವನವು ವಿರುದ್ಧಮಯ, ವಿರೋಧಮಯ, ವಿಚಾರಮಯ, ವಿಚಿತ್ರಮಯವೆಂದು ವೇದಾಂತಿಗಳ ವರ್ಣನೆ.

—ಚಲನಚಿತ್ರ ನಿರ್ಮಾಪಕರಿಗೆ ಇದು ಎಂದೋ ಗೊತ್ತಿತ್ತು.

◆ ◆ ◆

# ಸಪ್ತ ಸ್ವರಗಳು

(೧) ಅವ್ವಾ, ನನ್ನೂವೆ -" ಬೂ " ಕರ್ಕೊಂಡು ಹೋಗೋಕ್ಕೆ
ಹೇಳಮ್ಮಾ.........ಮ್ಮಾ..... !

(೨) ನಾನೆಷ್ಟೋದಿದರೂ ಹಾಳು ಚಂಡಾಲರು ನಂಬರು ಕೊಡದೆ ಇದ್ದರೆ
ನಾನೇನು ಮಾಡುವುದಣ್ಣಾ !

(೩) ನಾನು ಒಪ್ಪದೆಯಿರುವ ಹೆಣ್ಣನ್ನ ತಂದು ನನ್ನ ಕುತ್ತಿಗೆಗೆ ಕಟ್ಟಿದರೆ
ನಾನು ಭಾವಿಗೆಬಿದ್ದು ಸಾಯುತ್ತೇನೆ ! ನೋಡಿಕೊ !

(೪) ದೀಪಾವಳಿಗೆ ಬರಬೇಕು ಅಂತ ಕಾಗದ ಬಂದಿರುವಾಗ
ನಾನು ಹೋಗದೆ ಇರುವುದಿಲ್ಲವ್ಮಾ !

(೫) ಈ ಮಗು ನಾಲ್ಕು ದಿವಸದಿಂದ ಒಂದೇಸಮನೆ ಅರಚಿಕೊಳ್ಳುತ್ತಾ
ಇದೆಯಲ್ರಿ, ಡಾಕ್ಟ್ರೆ !

(೬) ಏನಯ್ಯಾ ! ಆಗಲೇ ಬಟ್ಟತಲೆ, ಬಟ್ಟತಲೆ, ಅಂತ ಹೀಯಾಳಿಸುವುದಕ್ಕೆ
ಷುರುಮಾಡಿದಿಯಾ ?

(೭) ಕಾಶಿಗೆ ಒಂದುಸಾರಿ ಹೋಗಿ ಬರಬೇಕು ಅಂತಿದ್ದೆ.... ನಡಿಯಲಿಲ್ಲ........
ಸರಿ....ಮುಂದಿನ ಜನ್ಮ ನೋಡೋಣ....

—ಪಾಠಾಳಿ.

---

ಬಡವನಿಗೆ ಸಿಕ್ಕಿದಾಗ—ಶ್ರೀಮಂತನಿಗೆ ಹಸಿವಾದಾಗ ಊಟಮಾಡುವುದೇ ಒಳ್ಳೆಯದಂತೆ.

—ಶ್ರೀಮಂತನಿಗೆ ಹಸಿವಾದಾಗ ಬಡವನೇ ಸಿಕ್ಕುವುದಿಲ್ಲವೇ !

  

# ವ್ಯಾಪಾರವೆಂಬ ಒಂದು ನಾಟಕ

(ಸೀನ್ ೧)

ಸ್ಥಳ—ಒಂದು PHARMACY




ಔಷಧಿ ಮಾರುವವನು ಮತ್ತು ಔಷಧಿ ಕೊಳ್ಳುವವನು (ಆಕೃತಿಯಲ್ಲಿ ಸ್ವಲ್ಪ ಭೀಮನನ್ನು ಹೋಲುವನು)

ಔಷಧಿ ಮಾರುವವನು—"ತೆಗೆದುಕೊಳ್ಳಿ, ಸ್ವಾಮಿ, ಒಂದು ತಿಂಗಳು ಕುಡಿದರೆ ಕಡ್ಡಿಯ ಹಾಗೆ ತೆಳ್ಳಗಾಗಬಹುದು" ವಿಶೇಷ ಔಷಧಿ.

(ತೆರೆ)

# (ಒಂದು ತಿಂಗಳ ನಂತರ)

(ಸೀನ್ ೨)

## ಸ್ಥಳ—ಅದೇ
## ಔಷಧಿ—ಅದೇ.




ಔಷಧಿ ಮಾರುವವನು ಮತ್ತು ಔಷಧಿ ಕೊಳ್ಳುವವನು (ಸ್ವಲ್ಪ ಕಡ್ಡಿಯನ್ನು ಹೋಲುವನು ಔಷಧಿಯನ್ನು ಕುಡಿದ ಮೇಲೆ)

**ಔಷಧಿ ಮಾರುವವನು—"ತೆಗೆದುಕೊಳ್ಳಿ, ಸ್ವಾಮಿ, ಒಂದು ತಿಂಗಳು ಕುಡಿದರೆ ಭೀಮಸೇನನಂತೆ ಆಗಬಹುದು!"**

(ತೆರೆ—ಸಂಪೂರ್ಣಂ)



" ಯುದ್ಧಕಾಲ—ಬೆಂಕಿಪೆಟ್ಟಿಗೆಗೆ "

# ಕುಂಬಳಕಾಯಿ ಕೋಟ್ಯಾಧೀಶ್ವರ

ಹೆಬ್ಬಿಗುಬ್ಬಾಲಿಯಲ್ಲಿ ಮೊನ್ನೆ ಪ್ರವಾಸ ಹೋಗಿದ್ದಾಗ ಅಲ್ಲೊಂದು ವಿಚಿತ್ರವನ್ನು ನೋಡಿದೆ. ರಾಜಬೀದಿಯಲ್ಲಿ ಒಂದು ದೊಡ್ಡ ಮೂರು ಉಪ್ಪರಿಗೆ ಮನೆ. ಬಣ್ಣಬಣ್ಣದ ಗಾಜುಗಳು. ಬಣ್ಣಬಣ್ಣದ ಗೋಡೆಗಳು; ಕೊಠಡಿ ಕೊಠಡಿಯಲ್ಲೂ ರಸ್ತೆಗೆ ಕಾಣಿಸುವಂತೆ ನಿಲುವುಗನ್ನಡಿಗಳು. ನಿಂತು ನೋಡಿದರೆ ಮುಖ ಕಾಣಿಸುವಂತಹ ಥಳಥಳಿಸುವ ಮೆಟ್ಟಲುಗಳು---ನೀವೆನ್ನಬಹುದು ನಿಂತು ನೋಡಿದರೆ ಕಾಲು ಹತ್ತಿರ ಮುಖ ಕಾಣಿಸುತ್ತದೆಯೇ ಎಂದು. ಆ ಥಳಥಳಿಸುವ ಮೆಟ್ಟಿಲ ಮೇಲೆ ನಿಂತಕೂಡಲೆ ಜಾರಿಬಿದ್ದು ಮೆಟ್ಟಲಿನಲ್ಲಿ ಮುಖಕಾಣಿಸುವಂತೆಯೇ ಆಗುತ್ತಿತ್ತು---ಈ ರೀತಿ ದಿವ್ಯವಾದ ಮನೆಯನ್ನು ಕಂಡೆ. ಆ ಮನೆಯ ಮುಂದುಗಡೆ ಮೋಟಾರು ನಿಲ್ಲುವುದಕ್ಕೆಂದು ಕಟ್ಟಿಸಿದ ಪೋರ್ಟಿಕೊ ಆ ಪೋರ್ಟಿಕೊಗೇ ಹಬ್ಬಿಸಿತ್ತು ಹೊರವಾಗಿ ಬೆಳೆದ ಒಂದು ಸಕ್ಕರೆ ಕುಂಬಳಕಾಯಿ ಬಳ್ಳಿ. ಆರರೆ! ಇಂತಹ ದಿವ್ಯವಾದ ಮನೆಗೆ ಹೀಗೆ ಕುಂಬಳಕಾಯಿ ಬಳ್ಳಿ ಹಬ್ಬಿಸಬಹುದೇ. ಹೂವಿನ ಬಳ್ಳಿ ಸಿಗಲಿಲ್ಲವೇ. ಅಥವಾ ನೆರಳಿಗೆ ಬಳ್ಳಿಯಾಯಿತು, ಊಟಕ್ಕೆ ತರಕಾರಿಯಾಯಿತು ಎಂದು ಮನೆಯವನೇನಾದರೂ ಹೀಗೆ ಮಾಡಿರಬಹುದೇ; ಇಷ್ಟು ಯೋಚನೆಮಾಡಿದ ಮನೆ ಯಜಮಾನನು ಖಂಡಿತ ಈ ಮನೆಯಲ್ಲಿ ಒಂದು ಇಂದ್ರಭವನ ಹೋಟಿಲನ್ನೋ---ಬಾಗಿಲ ಆಳತೆ ನೋಡಿದರೆ---ಗಜೇಂದ್ರ ಭವನ ಹೋಟಲನ್ನೋ---ಇಟ್ಟೇ ಇರಬೇಕು, ಎಂದು ಸಿದ್ಧಾಂತಮಾಡಿದೆ.

ಆವೇಳೆಗೆ ಎದುರಿನಲ್ಲಿ ನಮ್ಮ ಚಿರಪಿತ ಶಾಮುವು ಬಂದ, ಓಹೋ ಏನಯ್ಯಾ ಯಾವಾಗ ಬಂದೆ ಎಂದು ಕೇಳಿದ. ಹೀಗೆ ಬಂದೆನಯ್ಯಾ ಬೇಸಿಗೆ ರಜಾ. ನೀನು ಚೆನ್ನಾಗಿದ್ದೀಯಾ ಎಂದು ಕೇಳಿದೆ. ಹಾಗೂ ನಿನ್ನ ನೋಡಿ ಬಹಳ ದಿನಗಳಾಯ್ತು, ಈ ಕುಂಬಳಕಾಯಿ ಭವನಕ್ಕೆ ಹೋಗಿ ಕಾಫಿ ಕುಡಿಯೋಣ ಎಂದೆ, ಅಲ್ಲದೆ ಈ ಹೋಟಲಿಗೆ ಬೋರ್ಡುಯಾಕೆ ಬರೆಸಲಿಲ್ಲ ಎಂದೂ ಕೇಳಿದೆ.

ಶಾಮುವು ಮನೆಯನ್ನೂ ನೋಡಿದ. ನನ್ನನ್ನೂ ನೋಡಿದ---ಇದು ಯಾರ ಮನೆ ಗೊತ್ತೆ, ಇದು ಹೋಟಲಲ್ಲ. ಇನ್ನೇನು ದಿವಾನ್ ಬಹದ್ದೂರ ಆಗಬೇಕಾಗಿ ಸ್ವಲ್ಪದರಲ್ಲೇ ನಪಾಸಾದ ಕುಂಬಳಕಾಯಿ ಕೋಟ್ಯಾಧೀಶ್ವರನದ್ದು. ಇದೇನು ಹೋಟಲು ಎಂದು ತಿಳಿದುಕೊಂಡೆಯಾ, ಎಂದು ಹೇಳಿದ.

ಇದರ ವಿಚಾರ ಏನೋ ಸ್ವಾರಸ್ಯವಿರಬೇಕೆಂದು ಶಾಮುವನ್ನು ಮೆಲ್ಲಗೆ ಒಂದು ಇಂದ್ರಜಾಲಭವನಕ್ಕೆ ಕರೆದುಕೊಂಡು ಹೋಗಿ ಏನುಬೇಕಯ್ಯಾ, ಎಂದೆ. ನೀರು ಎಂದ. ಮಾಣಿ ಎರಡು ಬಟ್ಟಲು ಕಾಫಿ ತೆಗೆದುಕೊಂಡು ಬಾ

ಎಂದೆ. ನನಗೆ ಕಾಫಿ ಬೇಡ ನೀರು ಬೇಕು ಎಂದು ಶಾಮು ಹೇಳಿದ. ನಾವೇನು ಕೇಳಿದರೂ ಅವರು ಕೊಡುವುದು ನೀರನ್ನೇ, ಅದಕ್ಕೇ ಇಂದ್ರಜಾಲ ಭವನ ಎಂದು ಹೆಸರು ಎಂದು ಉತ್ತರಕೊಟ್ಟು ಮೆಲ್ಲಗೆ ಕುಂಬಳಕಾಯಿ ಕೋಟ್ಯಾಧೀಶ್ವರನ ಮಾತನ್ನೆತ್ತಿದೆ. ಶ್ಯಾಮು ಹೇಳಿದ್ದನ್ನು ಕೇಳಿ,

ನಮ್ಮೂರಿನಲ್ಲಿ ಸೆಣಕಲ ಶೆಟ್ಟಿ ಎಂದೊಬ್ಬ ಚಿಲ್ಲರೆ ಅಂಗಡಿಯವನಿದ್ದ. ಏನೋ ಅಲ್ಪ ಸ್ವಲ್ಪ ವ್ಯಾಪಾರಮಾಡಿಕೊಂಡು ಜೀವನ ನಡೆಸುತ್ತಿದ್ದ. ಅವನಿಗೊಬ್ಬ ಕುಲಪುತ್ರ ಹುಟ್ಟಿದ. ಅಪ್ಪ ಹಗಲೆಲ್ಲಾ ಸಂಪಾದಿಸಿದ್ದನ್ನು ಮಗ ಸಾಯಂಕಾಲ ಕಳೆಯಲಾರಂಭಿಸಿದ. ದಿನ ಬೆಳಗಾದರೆ, ಅಪ್ಪ ಮಕ್ಕಳಿಗೆ ವ್ಯಾಜ್ಯವೋ ವ್ಯಾಜ್ಯ. ಹೀಗೆ ಹತ್ತಾರು ವರ್ಷಗಳು ಕಳೆದುವು. ಆಗ ನೋಡಿ ಬಿಳಿಯರಿಗೂ, ಕೆಂಪರಿಗೂ ಎಲ್ಲೋ ಜಗಳ ಶುರುವಾಯ್ತಂತೆ. ಇಬ್ಬರೂ ದೇಶಗಳಲ್ಲೂ ಪ್ರಚಾರ ಮಾಡಿ, ತಮ್ಮ ಕಡೆ ಯುದ್ಧ ಮಾಡಿ ಎಂದು ಸೈನ್ಯ ಶಿಕ್ಷಣ ಕೇಂದ್ರಗಳನ್ನು ಆರಂಭಿಸಿದರು. ಹೆಬ್ಬಿಗುಬ್ಬಾಲೆಗೂ ದೆಸೆ ಬಂತು. ಅಲ್ಲೊಂದು ಶಿಕ್ಷಣ ಕೇಂದ್ರ ಶುರುವಾಯಿತು. ಅಲ್ಲಿರುವ ಕುರುಬರನ್ನೆಲ್ಲಾ ಬಿಳಿಯರ ಯುದ್ಧಕ್ಕಾಗಿ ತರಪೇತು ಮಾಡಲು ಶಿಕ್ಷಣಾಲಯವು ಸ್ಥಾಪಿಸಲ್ಪಟ್ಟಿತು. ಸರಿ, ಕಣ್ಣುಮುಚ್ಚಿ ಬಿಡುವುದರೊಳಗೆ ದೊಡ್ಡದೊಂದು ಊರೇ ಹೆಬ್ಬಿಗುಬ್ಬಾಲೆಯ ಉತ್ತರ ಸ್ಮಶಾನದ ಆಚೆ ಹುಟ್ಟಿಕೊಂಡಿತು. ಅಲ್ಲಿದ್ದ ಜನರಿಗೆಲ್ಲಾ ನಮ್ಮೂರಿನಿಂದಲೆ ತರಕಾರಿ ಸರಪರಾಜು ಮಾಡಬೇಕಾಗಿ ಬಂತು. ಓಡಾಡುವ ತರಕಾರಿಯನ್ನು ಬೇರೊಂದೂರಿಂದ ತರಿಸಿ ಕೊಳ್ಳುತ್ತಿದ್ದರು. ನಿಂತು, ಹಬ್ಬಿ ಬೆಳೆಯುವ ತರಕಾರಿಯನ್ನು ನಮ್ಮೂರಿನ ವರ್ತಕರೇ ಸರಪರಾಜು ಮಾಡುವಂತೆ ಏರ್ಪಡಿಸಿದರು. ಆಗ ನೋಡಿ, ಈ ಸೆಣಕಲ ಶೆಟ್ಟಿ ಮಗ ಹೋಗಿ ನಾನು ನಿಮಗೆ ದಿನಕ್ಕೆ ಸಾವಿರ ಮಣ ತರಕಾರಿ ಬೇಕಾದರೂ ಸರಪರಾಜು ಮಾಡುತ್ತೇನೆ, ಇಷ್ಟು ದುಡ್ಡಾಗುತ್ತದೆ ಎಂದು ಹೇಳಿದ. ಸೈನ್ಯಕ್ಕೆ ಸಾವಿರ ಮಣವೇ ಬೇಕಾಗಿತ್ತು. ಅವರೂ ಹ್ದೂ ಎಂದರು. ಸರಿ, ಕರಾರಿಗೆ ಸಹಿ ಮಾಡಿ ಮಗ ಮನೆಗೆ ಬಂದು ಸೆಣಕಲ ಶೆಟ್ಟಿಗೆ ಹೇಳಿದ. ಸೆಣಕಲ ಶೆಟ್ಟಿ ಹಾಗೆಯೇ ಬಿದ್ದ. "ಅಲ್ಲಾ ಮಗನೇ–ದಿನಕ್ಕೆ ಸಾವಿರ ಮಣ ತರಕಾರಿ ಹೇಗೆ ಸರಪರಾಜುಮಾಡುತ್ತೀ. ಹತ್ತು ಮಕರಿ ಬದನೇಕಾಯಿ ಹಾಕಿದರೂ ಒಂದು ಮಣ ಆಗುವುದಿಲ್ಲ. ಊರಿನ ತರಕಾರಿಯೆಲ್ಲಾ ಕೊಂಡು ಕೊಂಡರೂ ಈ ಸರಪರಾಜು ಅಸಾಧ್ಯ. ಸರಪರಾಜು ಸರಿಯಾಗಿಲ್ಲ ಎಂದು ಮನೆ ಮಠ ಎಲ್ಲಾ ಹರಾಜು ಹಾಕಿಬಿಡುತ್ತಾರಲ್ಲೋ" ಎಂದು ಬೊಬ್ಬೆ ಇಟ್ಟ.

ಮಗನು "ಹಾಗಲ್ಲಪ್ಪಾ, ನಮ್ಮ ಮಾವನ ಹಳ್ಳಿಯಲ್ಲಿ ಅವರ ಹಿತ್ತಲಲ್ಲಿ ಬರೀ ಕುಂಬಳಕಾಯಿ ಬಳ್ಳಿಗಳಿವೆ. ಅದನ್ನು ಜ್ಞಾಪಿಸಿಕೊಂಡೇ ಈ ಸರಪರಾಜಿಗೆ ಸಹಿ ಹಾಕಿದೆ. ಅಲ್ಲಿರುವ ಕುಂಬಳಕಾಯಿಗಳೇ ಎರಡು ತಿಂಗಳು ಸರಪರಾಜಿಗೆ ಸಾಕು. ಈಗ ಯಾರಿಗೂ ತಿಳಿಯದಂತೆ ನಮ್ಮ ಮಾವನ ಮನೆಗೆ ನಾನು ಹೋಗಿ, ಅವರ ಹಿತ್ತಲ ಕುಂಬಳ ಬಳ್ಳಿಯನ್ನು ಒಂದು ವರ್ಷಕ್ಕೆ ಗುತ್ತಿಗೆಗೆ ತೆಗೆದುಕೊಂಡು,

ಅದಕ್ಕೆ ಮುನ್ನೂರು ರೂಪಾಯಿ ಚೌಕಾಶಿಮಾಡಿ ಕೊಡುತ್ತೇನೆ. ಅದೇ ಹಣದಲ್ಲಿ ದೀಪಾವಳಿಗೆ ನನಗೆ ಕೊಡಬೇಕಾದ ಚಿನ್ನದ ತೋಡಾ ಮಾಡಿಸಿ ಕೊಡಿ ಎಂದು ಕೇಳುತ್ತೇನೆ.'' ನೀನು ಯಾರಿಗೂ ಈ ಸುದ್ದಿ ಹೇಳಬೇಡ ಎಂದು ಹೇಳಿ, ಎಲ್ಲಾ ಏರ್ಪಾಡನ್ನೂ ಸಾಂಗವಾಗಿ ನೆರವೇರಿಸಿದ.

ದಿನಾಗಲೂ ಗಾಡಿ, ಲಾರಿ, ಬೈಸಿಕಲ್, ಕತ್ತೆ, ದನ, ಕೂಲಿ ಮಕ್ಕಳ ವಿಧವಿಧ ವಾಹನಗಳ ಮೇಲೆ ಸೈನ್ಯ ಶಿಬಿರಕ್ಕೆ ತರಕಾರಿ ಸರಪರಾಜು, ಬರೀ ಕುಂಬಳಕಾಯಿ, ಸಣ್ಣ ಕುಂಬಳಕಾಯಿ, ದೊಡ್ಡ ಕುಂಬಳಕಾಯಿ, ಹಸಿ ಕುಂಬಳ, ಬಿಸಿ ಕುಂಬಳ, ಬೂದು ಗುಂಬಳ, ಕೆಂಪು ಗುಂಬಳ. ಮಧ್ಯೆ ಮಧ್ಯೆ, ಸೊಪ್ಪು, ಸೆದೆ, ಹಸುರಾಗಿರುವುದೆಲ್ಲಾ ತಿನ್ನಲು ತರಕಾರಿ, ''ಆಡು ತಿಂದು ಬದುಕಿದರೆ, ಮನುಷ್ಯ ಜೀರ್ಣಿಸಿಕೊಳ್ಳಲಾರನೇ'' ಎಂದು ಕಾಯಿ ಪಲ್ಯ, ಸೊಪ್ಪು, ಗೆಡ್ಡೆ ಗೆಣಸು, ಇದರ ಜೊತೆಗೆ ಹೆಚ್ಚುಹೆಚ್ಚಾಗಿ ಸುಮಾರು ೯೯೦ ಮಣದಷ್ಟು ಕುಂಬಳ ಕಾಯಿ ಸರಪರಾಜು ಮಾಡಿದ್ದೇ.

ಮೊದಲು ತಕರಾರು ಮಾಡಿದ ಸೈನ್ಯಾಧಿಕಾರಿಗೆ ಒಂದು ಹೊಸ ಮೋಟಾರು ಕಾರು ಸಿಕ್ಕಿತು. ಆತ ಸುಮ್ಮನಾದ. ಅವನಿಗೆ ವರ್ಗವಾಯಿತು. ಎರಡನೆಯಧಿ ಕಾರಿ ಬಂದಾಗ ತಕರಾರು ಮಾಡಿದಾಗ, ಲಂಚವನ್ನು ತುಚ್ಛೀಕರಿಸಿದಾಗ, ಕರಾರು ತೋರಿಸಿದರು. ದಿನಕ್ಕೆ ಸಾವಿರ ಮಣ ತರಕಾರಿ ಸರಪರಾಜು ಎಂದಿತ್ತೇ ವಿನಹಾ, ವಿಧವಿಧ ತರಕಾರಿ ಎಂದಿತ್ತಿಲ್ಲ. ಹಾಗೂ ಕುಂಬಳಕಾಯಿ ತರಕಾರಿಯಲ್ಲ ಎಂದು ಹೇಳುವಂತಿಲ್ಲ. ಒಂದು ವರ್ಷ ಸರಪರಾಜು ಆದ ಮೇಲೆ, ಶೆಟ್ಟಿಯ ಕರಾರು ಮುಂದುವರೆಯಲಿಲ್ಲ.

ಆ ವೇಳೆಗೆ ಸೆಣಕಲ ಶೆಟ್ಟಿ ದೊಡ್ಡ ಶೆಟ್ಟಿಯಾಗಿದ್ದ. ಈ ಮನೆಯನ್ನು ಕಟ್ಟಿಸಿದ. ಹತ್ತಿರ ಹತ್ತಿರ ಒಂದು ಕೋಟಿ ಇದೆ ಅವನ ಹತ್ತಿರ ಎನ್ನುತ್ತಾರೆ. ಅದಕ್ಕೇ ಕುಂಬಳಕಾಯಿ ಬಳ್ಳಿಯನ್ನ ಪೋರ್ಟಿಕೋಗೆ ಹಬ್ಬಿಸಿದ್ದಾನೆ.

---o---

ಅಕ್ಕಿ ಸಿಗದಿದ್ದರೆ—ಅರಳು ತಿನ್ನಬಹುದು ಎಂದು ಒಬ್ಬರ ಅಭಿಪ್ರಾಯ —ಅರಳು ಎಲ್ಲಿ ಬೆಳೆಯುತ್ತೆ ಎಂದು ತಿಳಿದುಕೊಂಡರೊ ಪಾಪ—ಜ್ಞಾಪಿಸಿ ಕೊಂಡಿರಬಹುದು, "ಮಲ್ಲಿಗೆ ಅರಳೇ—ಮಾವನ ಮಗಳೇ."

* * *

# *✲ ಗಂಡು ಬಂದಿತ್ತು! ✲*

[ ಶ್ರೀ ಬೇಂದ್ರೆಯವರ ತಾಳ್ಮೆ ಬೇಡಿ ]

ಗವ್ ಗವ್ ಗವ್‌ಗವ್ ಗವ್‌ಗವ್ ಗವ್ ಗವ್
ಗಂಡು ಬಂದಿತ್ತ ತಂಗೀ
ಗಂಡು ಬಂದಿತ್ತು || ಪ ||
ಕುರಿಮರಿಗಿಂತ ಕುಳ್ಳಗೆ ಇತ್ತ
ತೆಂಗಿಗಿಂತ ತೆಳ್ಳಗೆ ಇತ್ತ
ಮರದಿಂದಿಳಿದ ಮಂಗನ ಹಾಂಗ
ಛಂಗನೆ ನೆಗೆದಿತ್ತ.
ಬಾಯೊಳಗಿರುವ ಎಲ್ಲ ಹಲ್ಗಳೂ
ಇಣಿಕಿ ಬಂದಿತ್ತ !
ಅಡಿಯಡಿಯಿಡುತ ನಡೆವಂತೆಲ್ಲ
ನಡುಗಿಸಿ ಬಿಟ್ಟಿತ್ತಽತಂಗೀ
ಗಂಡು ಬಂದಿತ್ತ ! ಗವ್ ಗವ್....
ಗೊಗ್ಗರಗಿರುವ ಮಂಕು ಇತ್ತ
ಮೂಗು ಬಾಯಿಗೆ ಡೊಂಕು ಇತ್ತ
ಕಣ್ಣಾಲಿಗಳೊ ಭೂಮಿಗು ಬಾನಿಗು
ಹರಡಿಕೊಂಡಿತ್ತ !
ಜಿಕ್ಕಲಿ ಜಗಳ ಆಡಿದ್ದಾಂಗ
ಮಾತು ಆಡಿತ್ತ !
ಗವಿಯೊಲು ತೆರಳಿ ಬಾಯಿಯು ಅರಳಿ
ಜೊಲ್ಲು ಬಂದಿತ್ತ ಽ ತಂಗೀ
ಜೊಲ್ಲು ಬಂದಿತ್ತ || ಗವ್ ಗವ್....
ಡಾಂಬರದಂತೆ ಕಪ್ಪಗಿತ್ತ
ಸಿಪ್ಪೆಗಿಂತ ಸಪ್ಪಗಿತ್ತ
ಮುಖದೊಳಗೆಲ್ಲ ಜೇನಿನ ಗೂಡು
ಕಟ್ಟಿದಂತಿತ್ತ !
ದಾಡಿಯಾಗ ಕುರಚಲ ಗಿಡವು
ಹಬ್ಬಿದಂತಿತ್ತ !
ಕದ್ದು ನಿನ್ನನು ನೋಡಿದಾಗ
ಸುಮ್ಮನೆ ನಿಂತಿತ್ತ ! ಕೂಡಲೆ
ಛಂಗನೆ ನೆಗೆದಿತ್ತ ! ತಂಗೀ
ಗಂಡು ಬಂದಿತ್ತ ! ಗವ್ ಗವ್.... —ಬಿ. ವಿ. ಸು.

---

# “ನಮ್ಮ ಹಿರಿಯರು!”












# ಸೋಮೇಶ್ವರ ಸಪ್ತಕ

---

"ತಿಣಿಕಿದನು ಫಣಿರಾಯ, ರಾಮಾಯಣದ ಕವಿಗಳ ಭಾರದಲಿ" ಆದರಿಂದ "ರಘುವರನ ಚರಿತೆಯಲಿ ಕಾಲಿಡಲು ತೆರಪಿಲ್ಲ", ಎಂದು ಬಗೆದನಾದರೂ ಬೆದರದೆ ಗದುಗಿನ ವೀರನಾರಾಯಣನ ಕಿಂಕರನು, ಬರೆದ ಭಾರತವ. ಆಗ "ಕಲಿಯುಗ ದ್ವಾಪರ" ವಾಯ್ತು. ಕವಿ ಕೆಚ್ಚಾದ. ಕೆಚ್ಚು ಹೆಚ್ಚಿ ಹುಚ್ಚಾದ.

ಈ ಹುಚ್ಚು ಕವಿಗಳ ಜಗಳಕ್ಕೆ ಸೇರಿದ ನಾನು ಒಂದು ಬೆಳ್ದಿಂಗಳ ರಾತ್ರಿಯಲ್ಲಿ ಟೀ ಕುಡಿಯುತ್ತಾ, ಸೋಮೇಶ್ವಶತಕ ಪಾರಾಯಣ ಮಾಡುತ್ತಿದ್ದಾಗ,—ಅದೇನೋ, ಚಂದ್ರಿಕೆಯ ಶೀತಳತ್ವ ದೋಷವೋ, ಅಥವಾ ಪಾನದ ಪಿತ್ತದ ಫಲವೋ,—ಅವನು "ಎಲ ಎಲಾ! ನಾನು ಕವಿ ಸೋಮೇಶ್ವರ! ನಾನೇಕೆ ಬರೆಯಬಾರದೊಂದು ಶತಕ...." ಕಡೆಗೊಂದು ಸಪ್ತಕ" ಎಂದು ಸ್ಫೂರ್ತಿಗೊಂಡು ನಿದ್ದೆಗೆಟ್ಟು ಕಡೆಗೆ ಕನ್ನಡ ಸಾಹಿತ್ಯಕ್ಕೆ ಕಾಣಿಕೆ ಕೊಟ್ಟದ್ದು ಈಕೃತಿ.

ಫುಟ್‌ಬಾಲ್ ಆಟದಲ್ಲಿ ಸೆಂಟರ್ ಫಾರ್ವರ್ಡ್ ಮಧ್ಯರಂಗದಲ್ಲಿ, ಕಿಂ ಕರ್ತವ್ಯ ಮೂಢನಾಗಿ ಅರ್ಜುನನಂತೆ ನಿಂತಿದ್ದಾನೆ. ಅವನ ಪಾಲಿಗೆ ಪಾರ್ಥಸಾರಥಿಯಾಗಿ ಕವಿ ಉಪದೇಶಮಾಡುತ್ತಾನೆ

ಕೆಲವಂ ಹಿಂದುಗಳಿಂದೆ ಹೊಂದಿ ಕೆಲವಂ ಎದುರಾಳಿಯಂ ವಂಚಿಸಿ ।
ಕೆಲವಂ ಇನ್ನರ್ಗಳಿಂದ ಪಡೆದು ಕೆಲವಂ ಔಟರ್ಸಿಗಂ ಹಾಕುತಂ ।
ಕೆಲವಂ ತಂತ್ರದಿ ತಾನೆಮುಂದುವರಿಸಲ್ ಕೃತಾರ್ಥವಪ್ಪಂ ನಿಜಂ ।
ಪಲವಂ ಪಾಸು ಗೋಲಪ್ಪುದೈ ಹರಹರಾ ! ಆಧುನಿಕ ಸೋಮೇಶ್ವರಾ ।

ಹೀಗೆ ಗೋಲು ಹೊಡೆದು ಕೃತಾರ್ಥನಾದನಾದರೆ, ಆತನ ಬಲಗಾಲು ಚೆಂಡಿನಮೇಲೆ, ಕೈಗಳೆರಡೂ ಟೊಂಕದಮೇಲೆ, ಕಣ್ನೋಟ ಅಂತರಿಕ್ಷದಲ್ಲಿ—ಈ ರೀತಿಯ ಫೋಟೋ ಪತ್ರಿಕೆಗಳಲ್ಲಿ ಬೇಡಬೇಡವೆಂದರೂ ಬರದೇ ಬಿಟ್ಟೀತೆ ?

ಯಾವುದು ಯಾತಕ್ಕೆ ಭೂಷಣ ? ಕವಿ ಹೇಳಿದ್ದಾನೆ, ಕೇಳಿರಿ.

ರವೆ ಹಾಲ್ಕೀರಿಗೆ ಭೂಷಣಂ ರಜ ದಿನಂ ವ್ಯಾಟ್ನಿ ಮಹಾ ಭೂಷಣಂ
ದವನಂ ಜುಟ್ಟಿಗೆ ಭೂಷಣಂ ಯುವತಿಗಂ ಸ್ನೋಪೌಡರೇ ಭೂಷಣಂ
ಕಿವಿ ಗುರುಹಸ್ತಕೆ ಭೂಷಣಂ ಪತಿಗೆ ಸಾತಿವ್ರತ್ಯವೇ ಭೂಷಣಂ
ನವೆ ತುರಿ ಕಾಟಕೆ ಭೂಷಣಂ ಹರಹರಾ ! ಆಧುನಿಕ ಸೋಮೇಶ್ವರಾ ।

ಕಾಲೇಜಿನಿಂದ ಆಗತಾನೆ ಹೊರಗೆ ದೂಡಲ್ಪಟ್ಟ, ಪದವೀಧರರಿಗೆ ತಮಗೆ ಯೋಗ್ಯವಾದ ಜೀವನೋಪಾಯದ ಚುನಾವಣೆಗೆ ಈ ಪದ್ಯ ಸಹಕಾರಿ.

ಬರೆಯಲ್ ಬಲ್ಲೊಡೆ ರೈಟರಾಗು, ಸಟೆಯೊಳ್ ನಾನಾ ಚಮತ್ಕಾರವಂ |
ಬೆರೆಸಲ್ ಬಲ್ಲೊಡೆ ಲಾಯರಾಗು, ನಟನಾಗು ಕೈಬಾಯ್ಗಳಾಟೋಪಮಂ
ಮೆರೆಸಲ್ ಬಲ್ಲೊಡೆ ವೈದ್ಯನಾಗು ಸೂಜಿ ಚುಚ್ಚುವಪೇಕ್ಷೆ ತಾನಿರ್ದೊಡಂ
ಕಿರಲ್ಬಲ್ಲರ್ ಮೇಷ್ಟ್ರುಪ್ಪದೈ ! ಹರಹರಾ ! ಆಧುನಿಕ ಸೋಮೇಶ್ವರಾ |

"ಹುಚ್ಚುಮಗಳ ಮದುವೆಯಲ್ಲಿ ಉಂಡವ ಜಾಣ" ಎಂದು ಸಂಪತ್ತು ಸಂಪಾದಿಸಿದ ಸಮಯ ಸಾಧಕರ ಸಂಬಂಧವಾದದ್ದು ಈ ಪದ್ಯ.

ನೆಲದೊಳ್ ನಡೆಯರು, ಕಾಸನೆಣಿಸರು, ಔತಣಂ ನಿಷ್ಕಾರಣಂ ಮಾಡಿಪರ್
ನೆಲೆಯೋಳ್ ಪೇರಿಸಿ ಮಹಡಿ ಮನೆಕಟ್ಟುತಂ ವಂಶ ಸಾಲತಾವ್ ತೀರಿಪರ್
ಬಲುಲಾಭಂ ಬರೆ ಕಂಟ್ರಾಕ್ಟಿನೊಳ್ ಮೇಣ್ ಬ್ಲಾಕ್ ಮಾರ್ಕೆಟ್ಟಿನೋಳ್
'ಬಲೆ' ಎನ್ನುತ ಸತಿ ಕುಣಿವಳೈ ! ಹರಹರಾ ! ಅಧುನಿಕ ಸೋಮೇಶ್ವರಾ.

ಒಂದು ಚಲ ವಾಕ್ಚಿತ್ರ - "ವೇಶುಪಟಂ" - ದ್ರಾವಿಡಸ್ಥಾನದ ತಯಾರಿಕೆ—"ದೇವಲೋಕದ ಅಪ್ಸರೆಯರೇ ನಟಿಸಿದ್ದಾರೆ - ನಂದನವನವೇ ಸೀನಾಗಿದೆ - ತುಂಬುರುವೇ ತಂಬೂರಿ ಶ್ರುತಿ ಹಿಡಿದಿದ್ದಾರೆ - ಇದನ್ನು ಆಳು ಕಾಳು ಬಂಧು ಮಿತ್ರ ಕಳತ್ರ ಸಹಿತ ನೋಡದಿದ್ದವನೇ ಪಾಪಿ!" ಎಂದು ಜಾಹಿರಾತು ಬಣ್ಣಬಣ್ಣವಾಗಿ ಬಣ್ಣಬಣ್ಣಿಸಿ, ಪ್ರತಿ ಪೇಪರಿನ ಮುಂದಿನ ಪುಟದಿಂದ ಹಿಡಿದು ಗೋಡೆಗಳ ಮೇಲ್ಗಡೆ ವರೆಗೂ ಕೂಗೆದ್ದಿದೆ. ಕವಿಯಾದರೇನು, ಕಾಸಿರೋದಿಲ್ಲವೆ ? ಚಿತ್ರ ನೋಡಿದ್ದಾನೆ, ನೋಡಿ—

ಕತೆ ಚೆನ್ನಾಗದೆ ಛಾಯಗ್ರಹಣಕಾರ್ಯಂ ಲೇಸಾಗದೆ ಗೀತಮಂ
ಹಿತಮಂಗೈಯ್ಯದೇ ದರ್ಶಕಂ ನಿರಸಭಾಗಚ್ಛೇದಮಂ ಮಾಡದೆ
ಮಿತಿಮೀರಿದಪಹಾಸ್ಯ ನರ್ತನಾಭಾಸ ಸೆಟ್ಟಿಂಗ್‌ಗಳಿಂ ತುಂಬಿದಾ
ಪತಿತ ಚಿತ್ರಕೇಂ ಪಬ್ಲಿಸಿಟ್ ! ಹರಹರಾ ! ಆಧುನಿಕ ಸೋಮೇಶ್ವರಾ !

ಎಂದು ಮೂಗಿನಮೇಲೆ ಬೆರಳಿಟ್ಟುಕೊಂಡಿದ್ದಾನೆ.

ಮತ್ತೆ, ಮನುಷ್ಯನ ವೃತ್ತಿನಿರ್ಣಯ ಯಾವ ಪರೀಕ್ಷೆಯಿಂದ ?

ಅಜನಂ ಮೇಯಿಸಬಲ್ಲೊಡಾತ ಕುರುಬಂ ಕೈನೋಡುತಂ ಜೀವಿಪಂ
ನಿಜ ಸಾಮುದ್ರಿಕಂ ತಾ ಹಾಡಿದ್ದೇ ಹಾಡಲಾದಾಸಯ್ಯ ಕಿಸ್ಬಾಯವಂ
ರಜಕಂ ವಸ್ತ್ರದ ಜೀವಗಳ್ಳನಾ ಜೊಯ್ಸನಿಮಾನ್ಸ್ಕೇಷ ಲೆಕ್ಕಾಚರಂ
ದ್ವಿಜತಾ ಚಾಕರಿಬಾಹಿರಂ ! ಹರಹರಾ ಅಧುನಿಕ ಸೋಮೇಶ್ವರಾ

“ಖ್ಯಾತಿಬಾರದ ವಸ್ತು ಎಷ್ಟಿದ್ದರೇನು” ಎನ್ನುವ ದಾಸರಾಯರ ಪ್ರಶ್ನೆಗೆ ಮರು ಪ್ರಶ್ನೆ ಕವಿರಾಯರದು.

ಹುಳಿಮಾವು ಹಣ್ಣಿರ್ದೋಡೇನು ಹಸ್ನಿದ್ದರೇನು ಒಕ್ಕಾಸು ಕೊಡಿಲ್ಲದಾ
ಮಲಗಲ್ ಕಣ್ಣಿಗೆ ಬಾರದಿರ್ದ ನಿದ್ದೆತಾಂ ಏತಕಾ ಪರೀಕ್ಷೆಯೊಳ್
ಅಲುಗಲ್ ಬೀಳುವ ಹಲ್ಗಳೇತಕೆಣಿಸಲ್ ಬಾಯಾರಲ್ಬೇಗ್ಸಿಕ್ಕದಾ
ಜಲವೇ ಅಮೃತವಲ್ಲವೇ! ಹರಹರಾ ಆಧುನಿಕ ಸೋಮೇಶ್ವರಾ!

—ರಾಜ.

—o—



“ಯಾಕೋ, ಕೋಟನ್ನ ತೂತೂತ್ಮಾಡ್ಬಿಟ್ಟಿದ್ದೀಯ?”

“ಅಲ್ಲ ಸ್ವಾಮಿ, ಅಲ್ಯಾವುದೋ ಕರೆನ ತೆಗೆದ್ಬಿಡುಂತ ಹೇಳಿದ್ರಲ್ಲ ಸ್ವಾಮಿ. ತೆಗೆದ್ಬಿಟ್ಟೆ ಕತ್ರಿ ಇಂದ.”




# ಗ್ರೈಪ್ ಸಿರಪ್

## ಮಕ್ಕಳಿಗೆ ಆದರ್ಶ ಔಷಧಿ.

ಆಹಾರದ ತೊಂದರೆ, ಹೊಟ್ಟೆ ಹಿಡಿತ, ಹಲ್ಲುಬರುವಾಗ ಆಗುವ ತೊಂದರೆ ಇತ್ಯಾದಿಗಳನ್ನು ನಿವಾರಿಸುತ್ತೆ.

ತಯಾರಕರು:

**ಗೌರ್ನಮೆಂಟ್ ಇಂಡಸ್ಟ್ರಿಯಲ್ ಅಂಡ್ ಟೆಸ್ಟಿಂಗ್ ಲೆಬೊರೇಟರಿ**

**ಮಲ್ಲೇಶ್ವರಂ : : ಬೆಂಗಳೂರು.**




## ಲೋಧ್ರ—ಗರ್ಭಾಶಯ ಟಾನಿಕ್

ಅಕ್ರಮ ಮುಟ್ಟು, ಬಂಜೆತನ, ಗರ್ಭಜವಾಯು, ನಿದ್ರಾಭಂಗ, ಅಜೀರ್ಣ, ಮಲಬದ್ಧತೆ, ಕೆಮ್ಮು, ತಲೆನೋವು, ಬೆನ್ನುನೋವು ಮುಂತಾದುವನ್ನು ವಾಸಿಮಾಡುವುದು.

## ಅರ್ಕ—ಶ್ರೇಷ್ಠ ಜ್ವರ ನಿವಾರಿಣಿ

ಇನ್‌ಫ್ಲೂಯೆಂಜಾ, ಟೈಫಾಯಿಡ್, ಮಲೇರಿಯ ಮುಂತಾದ ಎಲ್ಲಾ ವಿಧವಾದ ಜ್ವರಗಳನ್ನೂ, ಪ್ಲೀಹ ಮತ್ತು ಪಿತ್ತಕೋಶ ರೋಗಗಳನ್ನೂ ಗುಣಪಡಿಸುವುದು.

## ಅಮೃತ—ರಕ್ತಶುದ್ಧಿ ಟಾನಿಕ್

ಎನೀಮಿಯ, ಮಲಬದ್ಧತೆ, ಅಜೀರ್ಣ, ನಿಶ್ಶಕ್ತಿ, ಬುದ್ಧಿಮಾಂದ್ಯ, ಎದೆಯ ನಿಶ್ಶಕ್ತಿ, ಜ್ಞಾಪಕಶಕ್ತಿ ಇಲ್ಲದಿರುವದು, ದೃಷ್ಟಿಮಾಂದ್ಯ, ತಲೆ ತಿರುಗುವುದು, ಚರ್ಮ ರೋಗಗಳು ಮುಂತಾದುವನ್ನು ವಾಸಿಮಾಡುವುದು.

ಏಜಂಟರು :

**ಸಿಟಿ ಮೆಡಿಕಲ್ ಅಂಡ್ ಜನರಲ್ ಏಜನ್ಸಿ,**

**ಚಿಕ್ಕಪೇಟೆ, : : : ಬೆಂಗಳೂರು ಸಿಟಿ.**

ಸಾರಥಿಯವರ

# ಪಂತುಲಮ್ಮ



21—4—1944 ರಿಂದ

**ಸ್ಟಾರ್ ಸಿನಿಮಾ, ಬಳ್ಳಾರಿಯಲ್ಲೂ**

ಮತ್ತು

26—4—1944 ರಿಂದ

**ಪ್ರಮೀಳಾ ಟಾಕೀಸ್, ಚಿತ್ತೂರಿನಲ್ಲೂ**

ಪ್ರದರ್ಶಿಸಲ್ಪಡುತ್ತಿದೆ.

---

ವಿವರಗಳಿಗೆ—

ಚಂದ್ರಫಿಲ್ಮ್ಸ್ ಲಿಮಿಟೆಡ್,

ಗಾಂಧಿನಗರ, ಬೆಂಗಳೂರು

— ಇವರಿಗೆ ಬರೆಯಿರಿ

ಜಯಂತ್ ದೇಶಾಯ್ ಪ್ರೊಡಕ್ಷರ್ಸ್‌ರವರಿಂದ
ತಯಾರಿಸಲ್ಪಟ್ಟ

ಹಾಸ್ಯ ರಸಭರಿತವಾದ

# ಝುಭಾನ್

ಈಶ್ವರಲಾಲ್ - ಕೌಸಲ್ಯ - ಮುಬಾರಕ್ - ದೀಕ್ಷಿತ್
— ಇತ್ಯಾದಿ ನಟವರ್ಗ —

ದಿಗ್ದರ್ಶಕರು :
ಜಯಂತ್ ದೇಶಾಯ್

ಶೀಘ್ರದಲ್ಲಿಯೇ ಬೆಂಗಳೂರಲ್ಲಿ ಪ್ರದರ್ಶನಾರಂಭ

